ಹಕ್ಕುಗಳು : ಶ್ರೀಮತಿ ಬಾನೂಬಿ ಎ. ಮುಲ್ಲಾ



ಬೆಲೆ : ರೂ. 5-00



ಕಲೆ : ಜಿ. ಕೆ. ವೆಂಕಟೇಶ

ಮುದ್ರಕರು : ಸುನೀಲ ಪ್ರಿಂಟರ್ಸ,
ದೇವಿಕೆರೆ ರೋಡ,
ಶಿರಸಿ (ಉ. ಕ.)

—ಪ. ಸು. ಭಟ್ಟ,
ಅಧ್ಯಕ್ಷರು,

ಪ್ರಕಾಶನ : ಉತ್ತರ ಕನ್ನಡ ಜಿಲ್ಲಾ ಸಾಹಿತ್ಯ ಪ್ರವರ್ತಕ
ಸಹಕಾರಿ ಸಂಘ (ನಿಯಮಿತ) ಶಿರಸಿ

## ನನ್ನ ನುಡಿ

ಯಾವುದೊಂದು ವಿಧದ ಬಲವಂತವಿಲ್ಲದೆ ಸಾಹಿತ್ಯ ಸೃಷ್ಟಿಗೆ ಕೈಹಾಕಲಾಗದಂಥ ಒಂದು ವಿಶಿಷ್ಟ ಪರಿಸರದಲ್ಲಿ ಬದುಕಬೇಕಾಗಿ ಬಂದ ನಾನು, ಸುಮಾರು ಕಾಲು ಶತಮಾನದ ಕಾಲಾವಧಿಯಲ್ಲಿ ಮಾಡಿದ ಸಾಹಿತ್ಯ ಪ್ರಕಟನೆ ನನಗೆ ಸಮಾಧಾನ ತಂದುಕೊಟ್ಟಿಲ್ಲ. ಆದರೆ ಉತ್ತರ ಕನ್ನಡ ಜಿಲ್ಲಾ ಸಾಹಿತ್ಯ ಪ್ರವರ್ತಕ ಸಂಘದ ಜನ್ಮದಿಂದಾಗಿ ಜಿಲ್ಲೆಯ ಸಾಹಿತ್ಯಿಕ ಚಟುವಟಿಕೆಗೆ ವಿಶೇಷ ಪ್ರಚೋದನೆ ಲಭಿಸಿದ ನಿಮಿತ್ತ, ಈ 'ಸಾಹಿತ್ಯ-ವಿವೇಚನೆ'ಯನ್ನು ಹೊರತರಲು ಸಾಧ್ಯವಾಯಿತು.

**ಲೇಖನಗಳನ್ನು ಕುರಿತು:**

1. ಕಾವ್ಯಸೃಷ್ಟಿ ರಹಸ್ಯ : ಆಂಗ್ಲಕವಿ ಸ್ಟೀಫೆನ್ ಸ್ಪೆಂಡರ್ ಅವರ Making of a poem ದಿಂದ ಪ್ರೇರಿತ ('ಪ್ರಪಂಚ' ದೀಪಾವಳಿ ಸಂಚಿಕೆ, 1960)
2. ಕಾವ್ಯದ ನಂದಾದೀಪ : 'ಸಂಗಮ' ಕನ್ನಡ ಡೈಜೆಸ್ಟ, ಜನವರಿ 1961
3. ಬಸವಣ್ಣನವರ ಎರಡು ವಚನ : ಡಾ: ಹಾ. ಮಾ. ನಾಯಕ ಸಂಪಾದಿತ 'ಬಸವ ಪರುಷ,' 1968
4. ಶರಣರ ಗೋಷ್ಠಿ : 'ಶೂನ್ಯ ಸಂಪಾದನೆ: ಪರಾಮರ್ಶೆಯ ವಿಮರ್ಶೆ' ಯಲ್ಲಿ ಪ್ರಕಟಿತ,
5. ಚುಟುಕು ಸಾಹಿತ್ಯದ ಹುಟ್ಟು-ಬೆಳವಣಿಗೆ : 1971
6. ನವ್ಯಕಾವ್ಯದ ಧಾಟಿ-ಧೋರಣೆ : 1968
7. ಕರ್ಬಲಾ ಪದಗಳು : ಡಾ: ಆರ್. ಸಿ. ಹಿರೇಮಠ ಸಂಪಾದಿತ, 'ಜಾನಪದ ಸಾಹಿತ್ಯದರ್ಶನ' 1974

ಕೃತಜ್ಞತೆಗಳು :

ಲೇಖನಗಳನ್ನು ಪ್ರಕಟಿಸಿದ ಪತ್ರಿಕೆ ಹಾಗೂ ಗ್ರಂಥ ಸಂಪಾದಕರಿಗೆ,

ಗ್ರಂಥ ಪ್ರಕಟನೆಗೆ ಕೆಲಮಟ್ಟಿನ ಧನ ಸಹಾಯಮಾಡಿದ ಕರ್ನಾಟಕ ಸರಕಾರದ ಪಠ್ಯ ಪುಸ್ತಕ ನಿರ್ದೇಶಕರಿಗೆ,

ಇತರ ಎಲ್ಲ ಹೊಣೆಗಾರಿಕೆ ಹೊತ್ತು ಸುಂದರವಾಗಿ ಪುಸ್ತಕವನ್ನು ಹೊರತಂದ ಉತ್ತರ ಕನ್ನಡ ಜಿಲ್ಲಾ ಸಾಹಿತ್ಯ ಪ್ರವರ್ತಕ ಸಹಕಾರಿ ಸಂಘಕ್ಕೆ, ಅದರಲ್ಲಿ ವಿಶೇಷವಾಗಿ ಆತ್ಮೀಯ ಸ್ನೇಹಿತರಾದ ಶ್ರೀ ಪಿ. ವಿ. ಶಾಸ್ತ್ರಿ ಕಿಬ್ಬಳ್ಳಿ ಅವರಿಗೆ,

ಕರಡು ಪ್ರತಿ ತಯಾರಿಸುವಲ್ಲಿ ನೆರವಾದ ಪ್ರಿಯ ಸಹೋದ್ಯೋಗಿಗಳಾಗಿದ್ದ ಪ್ರೊ. ಎಸ್. ಆರ್. ಪಾಟೀಲ ಹಾಗೂ ಕಾಮತ ಅವರಿಗೆ,

ಮತ್ತು ಎಲ್ಲ ವಿಧದಿಂದಲೂ ಸಹಕಾರವಿತ್ತ ಸ್ನೇಹಿತರೆಲ್ಲರಿಗೆ,

ಯೂನಿವರ್ಸಿಟಿ ಫ್ಲಾಟ್ 54/2
ಸಂಪಾಪತಿ ರಸ್ತೆ,
ಮೈಸೂರು-೬
ದಿ. ೨೮-೧೧-೧೯೭೫ ಎಂ. ಅಕಬರಅಲಿ

* * * *

## ಪ್ರಕಾಶಕರ ಮಾತು

ಕನ್ನಡದ ಪ್ರಸಿದ್ಧ ಕವಿ ವಿಮರ್ಶಕ ಪ್ರೊ. ಎಂ. ಅಕಬರ ಅಲಿ ಅವರ 'ಸಾಹಿತ್ಯ ವಿವೇಚನೆ' ಸಂಘದ ನಾಲ್ಕನೆಯ ಹೊತ್ತಿಗೆಯಾಗಿ ತರಲು ಹರ್ಷವೆನಿಸು- ತ್ತದೆ.

ಅಕಬರ ಅಲಿಯವರ ಆಳವಾದ ಸಾಹಿತ್ಯ ಅಭ್ಯಾಸ ಸಾಹಿತ್ಯದ ಅಭ್ಯಾಸಿ- ಗಳಿಗೆ ಮಾರ್ಗದೀಪವಾಗುವದೆಂದು ನಂಬಿರುವೆವು. ಇದನ್ನು ಸಂಘದ ಪರವಾಗಿ ಪ್ರಕಾಶಿಸಲು ಅನುಮತಿ ಕೊಟ್ಟ ಪ್ರೊ. ಅಕಬರ ಅಲಿ ಅವರಿಗೂ, ಅಂದವಾಗಿ ಮುದ್ರಿಸಿಕೊಟ್ಟ ಸುನೀಲ ಪ್ರಿಂಟರ್ಸ ಅವರಿಗೂ ನಮ್ಮ ಕೃತಜ್ಞತೆಗಳು.

—ಪಿ. ಎಸ್. ಭಟ್ಟ

# ಪರಿವಿಡಿ

# ಕಾವ್ಯ ಸೃಷ್ಟಿ ರಹಸ್ಯ

ಕವಿಯೂ ಒಬ್ಬ ಕಲಾವಿದ. ಇತರ ಕಲಾವಿದರಂತೆ ಇವನೂ ತಾನು ಕಂಡುಂಡ ಜೀವನಾನುಭವ, ಪ್ರಕೃತಿಯ ಸೌಂದರ್ಯವೈಭವಗಳನ್ನು ತನ್ನದೇ ಆದ ಮಾಧ್ಯಮದಲ್ಲಿ ಸೆರೆಹಿಡಿಯುತ್ತಾನೆ. ತನ್ನದೇ ಆದ ಒಲವು-ನಿಲವುಗಳಿಗನುಗುಣವಾಗಿ ಅವಕ್ಕೆ ರೂಪುಗೊಡುತ್ತಾನೆ. ಹೀಗೆ ರೂಪುಗೊಂಡ ಕವಿತೆಯನ್ನು ಕಂಡು ನಾವು ಬೆರಗಾಗುತ್ತೇವೆ. ಅದರ ರಸಾನುಭವದಿಂದ ಸಂತೋಷಭರಿತರಾಗುತ್ತೇವೆ.

ಇಂಥ ರಸಾನುಭವವನ್ನು ಒದಗಿಸುವ ಕಾವ್ಯಸೃಷ್ಟಿಯನ್ನು ಕವಿ ಹೇಗೆ ಮಾಡುತ್ತಾನೆಂಬುದು ಒಂದು ರಹಸ್ಯವೇ ಆಗಿದೆ. ಆ ರಹಸ್ಯಭೇದ ಸುಲಭಸಾಧ್ಯವಾದುದಲ್ಲ. ಹಲವರು ಹಲವೆಂಟು ತೆರನಾಗಿ ಈ ವಿಷಯದ ಮೇಲೆ ಬೆಳಕನ್ನು ಚೆಲ್ಲುವ ಪ್ರಯತ್ನ ಮಾಡಿದ್ದಾರೆ. ಇದಿಲ್ಲಿ ಅಂಥ ಒಂದು ಪ್ರಯತ್ನ ಮಾಡಲಾಗಿದೆ.

ಕವಿಯ ಸೃಷ್ಟಿಕಾರ್ಯದ ಬಗ್ಗೆ ವಿಚಾರ-ವಿಮರ್ಶೆ ನಡೆದಾಗಲೆಲ್ಲ 'ಸ್ಫೂರ್ತಿ'ಯ ಉಲ್ಲೇಖ ಬಂದೇ ಬರುತ್ತದೆ. ಕವಿಗಳನ್ನು ಕೇಳಿದರೆ 'ಸ್ಫೂರ್ತಿ' ಯಿಲ್ಲದೆ ಕಾವ್ಯ ಬರೆಯುವದು ಸಾಧ್ಯವಿಲ್ಲವೆಂದೇ ಹೆಚ್ಚಾಗಿ ಹೇಳುವರು. ಜಿ. ಪಿ. ರಾಜರತ್ನಂ ಅವರ ಹಾಗೆ "My Poems are more of irritation than of inspiration" "ನನ್ನ ಕವಿತೆಗಳು ಸ್ಫೂರ್ತಿಯಿಂದ ಉದಿಸಿದವುಗಳಿಗಿಂತಲೂ ಕೆರಳಿಕೆಯಿಂದ ಮೂಡಿದವುಗಳೇ ಹೆಚ್ಚು" - ಎಂದು ಹೇಳುವವರು ದುರ್ಲಭ. ಆದರೂ ಜಿ. ಪಿ. ರಾಜರತ್ನಂ ಅವರು ಹೇಳುವ 'irritation'-ಅಥವಾ 'ಕೆರಳಿಕೆ' ಸ್ಫೂರ್ತಿಗೆ ಒಂದು ಸಂಚಾಲನ ಶಕ್ತಿಯಾಗಿಯೇ ಬರುತ್ತದೆಂದು ಆಲೋಚಿಸಿದಲ್ಲಿ ಅವಗತವಾಗದಿರದು.

ಕಾವ್ಯಸೃಷ್ಟಿಗೆ ಅನಿವಾರ್ಯ ಅಂಗವಾಗಿ ಪರಿಣಮಿಸಿದ ಈ 'ಸ್ಫೂರ್ತಿ' ಎಂಬುದಾದರೂ ಏನು ಎಂಬುದು ತೀರ ಗಹನವಾದ ವಿಷಯವಾಗಿದೆ. ಅದೊಂದು 'ಮಾನಸಿಕ ಶಕ್ತಿ ವಿಶೇಷ' ವೆಂಬುದಂತೂ ಸರಿಯೆ. ಆದರೆ ಅದೊಂದು 'ಅಲೌಕಿಕ ಶಕ್ತಿ' ಯಾಗಿದೆಯೆಂದು ಹೇಳುವವರೂ ಉಂಟು. ಇಂಥ ವಿಚಾರಸರಣಿಗೆ ಕಾರಣ

ವಿಲ್ಲದಿಲ್ಲ. ದಿನಬೆಳಗು ನಾವು ಸೂರ್ಯೋದಯವನ್ನು ನೋಡುತ್ತೇವೆ; ಆದರಲ್ಲಿ 'ಅಂಥದೇನೂ ವಿಶೇಷವಾದ ಚೆಲುವು ನಮ್ಮ ಸಾಮಾನ್ಯ ದೃಷ್ಟಿಗೆ ಕಾಣುವದಿಲ್ಲ; ಕಂಡರೂ ತೀರ ಕ್ವಚಿತ್ತಾಗಿ. ಹೀಗಿರುವಾಗ ಕವಿಯಾದವನಿಗೆ ಮಾತ್ರ ಅಂಥ ಸಾಮಾನ್ಯ ಸಂಗತಿಯಲ್ಲೂ ಅಸಾಮಾನ್ಯ ಚೆಲುವನ್ನು ಕಾಣುವದು, ಅದು ಹೇಗೆ ಸಾಧ್ಯವಾಗುತ್ತದೆ? ಇಂಥ ಸಮಸ್ಯೆ ನಮಗೆ ಎದುರಾದಾಗ ನಾವು ಅದೊಂದು 'ಅಲೌಕಿಕ ಶಕ್ತಿ' ಯಾಗಿದೆ ಎಂದುಕೊಳ್ಳುತ್ತೇವೆ. "Poets are born, not made" ಎಂಬ ಉಕ್ತಿಯಲ್ಲಿಯೂ ಈ ಅರ್ಥವೇ ಧ್ವನಿಸುತ್ತದೆ. ವಿವರಣೆ ಸಾಧ್ಯವಿಲ್ಲದಾಗ ಸಾಂತ್ವನಕ್ಕಾಗಿ ನುಡಿದ ಮಾತೇ ಇದಾಗಿದೆಯೆಂಬ ಶಂಕೆ ಒಮ್ಮೊಮ್ಮೆ ಮೂಡುತ್ತದೆ.

ಚೆಲುವನ್ನು ಕಾಣುವ ಕಣ್ಣು, ಅದನ್ನು ಆಸ್ವಾದಿಸುವ-ರಸಿಕತೆ ಪ್ರತಿ ಮಾನವನಲ್ಲಿಯೂ ಇದ್ದೇ ಇರುತ್ತದೆ. ಇಲ್ಲದೇ ಹೋದರೆ, ಕವಿಯಾದವನು ಬಿಳಿಯ ಹಾಳೆಯ ಮೇಲೆ ಮೂಡಿಸಿದ—ಅಂದರೆ ಶಬ್ದಪ್ರಸರದಲ್ಲಿ ಕಂಡರಿಸಿದ-'ಚೆಲುವಿಕೆ' ಯಿಂದಲೇ ಕವಿಯ ಮನೋಲೋಕದ ಸಜೀವ ಸೌಂದರ್ಯಜಗತ್ತನ್ನು ಕಾಣುವದು 'ಕವಿ' ಯಲ್ಲದ ಮಾನವನಿಗೆ ಅದೆಂತು ಸಾಧ್ಯವಾಗುತ್ತಿತ್ತು? ಕವಿಯೂ ತತ್ವಜ್ಞಾನಿಯೂ ಆದ ಕಾರ್ಲಾಯಿಲ್‌ನ ಹೇಳಿಕೆ "We are all poets" ಎಂಬುದನ್ನು ಈ ಸಂದರ್ಭದಲ್ಲಿ ನೆನೆಯಬಹುದಾಗಿದೆ. ಇಷ್ಟೆ; 'ಕವಿ' ಯಾದವ ತಾನು ಕಂಡುಂಡ ಚೆಲುವನ್ನು, ನೋವು-ನಲಿವುಗಳನ್ನು ಸೆರೆಹಿಡಿದು, ತನ್ನ ಮಾಧ್ಯಮದಲ್ಲಿ ಅದು ಅಮರವಾಗಿ ಉಳಿಯುವಂತೆ ಮಾಡುವ ಶಕ್ತಿವಿಶೇಷವೊಂದನ್ನು ಹೊಂದಿರುತ್ತಾನೆ. ಅಂಥ ಒಂದು ಶಕ್ತಿ-ಸೃಷ್ಟಿಕಾರಕ ಶಕ್ತಿ-ಇಲ್ಲದ ಸಾಮಾನ್ಯರೆಲ್ಲ ಕಾರ್ಲಾಯಿಲ್ ಹೇಳುವಂತೆ ಕವಿಗಳಾದರೂ ನೋವು-ನಲಿವು, ಒಲವು-ಚೆಲುವಿನ ಅನುಭವ ಮಾತ್ರದಲ್ಲಿ ತೃಪ್ತಿಗೊಂಡು, ತಮ್ಮ ಪ್ರತಿಕ್ರಿಯೆಯನ್ನು 'ಉದ್ಗಾರ' 'ಮುಖಭಾವ' ರೂಪದಲ್ಲಿ ಮಾತ್ರ ವ್ಯಕ್ತಪಡಿಸಿ ಬಿಮ್ಮಗಿದ್ದು ಬಿಡುತ್ತಾರೆ. ಈ ಕಾರಣಕ್ಕಾಗಿಯೇ ಅವರನ್ನು ನಾವು 'ಮೂಕಕವಿ' ಗಳೆಂದು ಕರೆಯಬಹುದಾಗಿದೆ.

ಆದರೆ 'ಕವಿ'ಯಾಗಿ ಬೆಳೆದವನು ತನ್ನಲ್ಲಿಯ ಸಹಜ ಸೌಂದರ್ಯದೃಷ್ಟಿಯನ್ನು ಸಂಸ್ಕರಿಸಿಕೊಂಡಿರುತ್ತಾನೆ. ತನ್ನ ಹೃದಯವೀಣೆಯನ್ನು ಸೂಕ್ಷ್ಮ ಸಂವೇದನೆಗೆ ಅಗತ್ಯವಾದ ರೀತಿಯಲ್ಲಿ ಶೃತಿಗೊಳಿಸಿಕೊಳ್ಳಲು ಪರಿಶ್ರಮಿಸಿರುತ್ತಾನೆ. ಇಂಥ ಆತನ 'ಪೂರ್ವಸಾಧನೆ' ಯ ಅಪೂರ್ವ ಸ್ವರೂಪದ ಕಲ್ಪನೆಯಿಲ್ಲದೇ, ಅವನ ಸೃಷ್ಟಿಕಾರಕ ಶಕ್ತಿ-ಅದಕ್ಕೆ ಸಂಬಂಧಿಸಿದ ಸ್ಫೂರ್ತಿ-ಒಂದು 'ಅಲೌಕಿಕ ಶಕ್ತಿ' ಎಂದು ಕರೆಯುತ್ತೇವೆ. ಇಲ್ಲಿಯ 'ಅಲೌಕಿಕ' ಎಂಬುದನ್ನು 'ಅಸಾಮಾನ್ಯ' ಎಂಬರ್ಥದಲ್ಲಿ ಬಳಸಿದರೆ ಯಾವ ಅಡ್ಡಿಯೂ ಇಲ್ಲ.

ಕವಿಯ ಅಸಾಮಾನ್ಯ ಶಕ್ತಿಯಾದ ಈ 'ಸ್ಫೂರ್ತಿ' ಆತನ ಸೃಷ್ಟಿಕಾರಕ ಕಾರ್ಯದಲ್ಲಿ ಎಷ್ಟರ ಮಟ್ಟಿಗೆ ಕಾರ್ಯಾನ್ವಿತವಾಗಿರುತ್ತದೆ-ಎಂಬುದು ಮನನೀಯ ಅಂಶವಾಗಿದೆ.

ಡಿ. ವೆಲೆರಿ ಹೇಳುತ್ತಾರೆ: "One line is given to poet by god or by nature, the rest he has to discover for himself" ಕಾವ್ಯದ ಆರಂಭದಲ್ಲಿ ಮಾತ್ರ ಸ್ಫೂರ್ತಿ ತನ್ನ ಕೈವಾಡವನ್ನು ತೋರಿಸುತ್ತದೆ. ಆರಂಭದಿಂದ ಅಂತ್ಯದ ವರೆಗಿನ ಮಧ್ಯಂತರದ ಅವಧಿಯಲ್ಲಿ ಕವಿಗೆ ಅತ್ಯಂತ ಪರಿಶ್ರಮ ವಹಿಸಬೇಕಾಗುತ್ತದೆ. ಪ್ರತಿಭಾವಂತ (Genius) ನಲ್ಲಿ ಒಂದು ಪಾಲು 'ಸ್ಫೂರ್ತಿ' (Inspiration) ಕೆಲಸ ಮಾಡಿದರೆ, ತೊಂಭತ್ತೊಂಭತ್ತು ಪಾಲು ಬೆವರು-ಪರಿಶ್ರಮ (Perspiration) ಕಾರ್ಯ ನಿರ್ವಹಿಸುತ್ತದೆಂದು ಹೇಳಲಾಗುತ್ತದೆ. ಈ ಮಾತು ಕವಿಗೂ ಅನ್ವಯಿಸುತ್ತದೆ.

ಯಾವ ಸೃಷ್ಟಿಕಾರಕ ಕ್ರಿಯೆಯಲ್ಲಾದರೂ ಕವಿಯಾದವನಿಗೆ ಸಾಮಾನ್ಯವಾಗಿ ಮೊತ್ತಮೊದಲು ಒಂದು 'ಪದ'ವೊ 'ಪದ ಸಮೂಹ'ವೊ ಹೊಳೆಯುತ್ತದೆ. ಅದು ಕಂಡುಂಡ ಚೆಲುವನ್ನು ಅಭಿವ್ಯಕ್ತಗೊಳಿಸಲು ಯತ್ನಿಸುವ ಮನಾಭಿಲಾಷೆಯ ಕಾರಂಜಿ ನೆಗೆತ. ಅದೇ ಕಾವ್ಯದ 'ಬೀಜಾರೋಪಣ'. ಆ ಪದ ಅಥವಾ ಪದಸಮೂಹವೆಂಬ ಬೀಜವೇ ಕವಿ ಹೃದಯದ ಭೂಮಿಯಲ್ಲಿ ಕಾವುಗೊಂಡು ಮೊಳಕೆಯೊಡೆದು, ಮುಗುಳಾಗಿ ಬೆಳೆದು, ಹೂವಾಗಿ ಅರಳಿ ಪರಿಪೂರ್ಣತೆಯನ್ನು ಹೊಂದಬೇಕಾಗುತ್ತದೆ. ಇದಿಲ್ಲಿ ಕೃಷಿಯ ಪ್ರಶ್ನೆ ಬರುತ್ತದೆ. ಈ ಕೃಷಿಯನ್ನು ಮಾಡುವಲ್ಲಿಯೇ ಕವಿಗೆ ಪರಿಶ್ರಮ ವಹಿಸಬೇಕಾಗುತ್ತದೆ.

ಇಂಥ ಕಾವ್ಯಸೃಷ್ಟಿಗೆ ಅನುಕೂಲವಾದ ಆವರಣವನ್ನು ಮನಸ್ಸಿನ ಏಕಾಗ್ರತೆ ಒದಗಿಸುತ್ತದೆ. ಈ ಏಕಾಗ್ರತೆಗಾಗಿ ಕೆಲವೊಬ್ಬರು ಕೆಲವೊಂದು ವಿಶಿಷ್ಟ ವಿಧಾನಗಳನ್ನು ಅನುಸರಿಸುತ್ತಾರೆ. ಒಬ್ಬರಿಗೆ ಅವಿರತ 'ಧೂಮಪಾನ'ದಲ್ಲಿ ತೊಡಗಬೇಕಾಗುತ್ತದೆ. ಆಂಗ್ಲ ಸಾಹಿತಿಗಳೊಬ್ಬರಿಗೆ ಕೆತ್ತಳೆ ಹಣ್ಣಿನ ತೊಗಟೆಯ ವಾಸನೆಯೇ ಅವಶ್ಯಕ ಏಕಾಗ್ರತೆಯನ್ನು ಒದಗಿಸುತ್ತಿತ್ತಂತೆ. ಆದರೆ ಇದಕ್ಕಿಂತ ವಿಚಿತ್ರತರವಾದ ಆವರಣಗಳಿಂದ ತಮಗೆ ಬೇಕಾಗುವ ಏಕಾಗ್ರತೆಯನ್ನು ಪಡೆವ ಕವಿಗಳೂ ಉಂಟು.

ಇಲ್ಲಿ ಗಮನಿಸಬೇಕಾದ ಅಂಶವಿಷ್ಟೆ. ಆಯಾ ವಸ್ತುವಿಶೇಷಗಳೇ ಅವರ ಸ್ಫೂರ್ತಿಯ ಸಾಧನಗಳೆಂದು ಕೆಲವರು ನಂಬುತ್ತಾರೆ. ನಿಜವಾಗಿ ನೋಡಿದರೆ

ಆವು ಅವರ ಮಾನಸಿಕ ಏಕಾಗ್ರತೆಗೆ ಚಾಲನೆ ಮಾತ್ರ ಕೊಡುತ್ತದೆ. ಮುಂದೆ ಮಾತ್ರ ಅವರು ಏಕಾಗ್ರ ಚಿತ್ತದಿಂದ ಕಾರ್ಯತತ್ಪರರಾಗಿ ಸೃಷ್ಟಿಕಾರಕ ಕಾರ್ಯ ಮುಂದುವರೆಸುತ್ತಾರೆ.

ಇಲ್ಲಿಗೇ ಮುಗಿಯಲಿಲ್ಲ ಇದರ ಕತೆ. 'ಸ್ಫೂರ್ತಿ' ತನ್ನ "ಕೋಳಿಮಿಂಚಿ"ನ ಕಾರ್ಯ ಮಾಡಿಯಾದ ನಂತರ, ಅನುಕೂಲ ಪರಿಸ್ಥಿತಿಯಲ್ಲಿ 'ಮಾನಸಿಕ ಏಕಾಗ್ರತೆ' ಸಾಧ್ಯವಾದ ತರುವಾಯ, ಇನ್ನೊಂದು ಮಾನಸಿಕ ಕ್ರಿಯೆಯನ್ನು ಕವಿ ಕೈಗೊಳ್ಳುತ್ತಾನೆ. ಅದೇ ಕವಿಯ 'ಕಲ್ಪನಾಶಕ್ತಿ'ಯ ಲೀಲಾವಿಲಾಸ.

ಈ ಕಲ್ಪನಾಶಕ್ತಿಯು ಕವಿಮನದ- ಜಾಗ್ರತ ಹಾಗೂ ಅಜಾಗ್ರತ ಚಿತ್ತದ-ಕೂಸೇ ಆಗಿದೆ. ಕವಿಯು ಜೀವನದಲ್ಲಿ ಕಂಡುಂಡ ವಿವಿಧವಾದ ವಸ್ತು-ವ್ಯಕ್ತಿ, ಸಂಗತಿ-ಸಂನಿವೇಶಗಳಿಗೆ ಸಂಬಂಧಿಸಿದ ಅನುಭವವಿಶೇಷಗಳು ಅವನ ಮನೋಭಂಡಾರದಲ್ಲಿ ಬಿದ್ದಿರುತ್ತವೆ. ಅಂಥ ರಸಸಾಮಗ್ರಿಯ ಭಂಡಾರ ಅದೆಷ್ಟು ಹೆಚ್ಚೋ ಅಷ್ಟರ ಮಟ್ಟಿಗೆ ಕವಿಯ ಶ್ರೀಮಂತಿಕೆ ಅಧಿಕವಾಗುತ್ತದೆ. ಇಂಥ ಅನುಭವಭಂಡಾರದಿಂದ ತನಗೆ ಬೇಕಾದಾಗ ಕವಿಯು ಯಾವದೊಂದು ಅನುಭವವನ್ನು ಎತ್ತಿಕೊಂಡು ಪ್ರಸ್ತುತವಾದ ತನ್ನ ಕಾವ್ಯ ನಿರ್ಮಿತಿಯ-ಸಂದರ್ಭದಲ್ಲಿ ಬಳಸಿಕೊಳ್ಳುತ್ತಾನೆ.

ಈ ಕ್ರಿಯಾವಿಶೇಷದ ವಿವರಣೆಗಾಗಿ ಒಂದು ಚುಟುಕನ್ನು ಗಮನಿಸೋಣ.

> "ನೀಲಿಯ ನೆಳಲಿನ ಭರ್ಜರಿ ಸೆರಗಿನ
> ಕಂಚುವ ಮಿಂಚುವ ಮುತ್ತುಮಣಿ
> ಕಣ್ಸೆಳೆವಂದದಿ ಕುಣಿಯುತ ಬಂದಳು
> ಯಾಮಿನಿಯೆಂಬುವ ಲಂಬಾಣಿ"
>
> (ಎಂ. ಅಕಬರ ಅಲಿ)

ಕಣ್ಣು ಕುಕ್ಕುವಂಥ ಭರ್ಜರಿವೇಷದ ಲಂಬಾಣಿಯರ ನೃತ್ಯವನ್ನು ಕಂಡ ಹಳೆಗಾಲದ ಒಂದು ನೆನಪು ಇಲ್ಲದೆ ಹೋಗಿದ್ದರೆ ನಕ್ಷತ್ರರಂಜಿತವಾದ ರಾತ್ರಿಯ ರಮ್ಯ-ವರ್ಣನೆ ಸಾಧ್ಯವಾಗುತ್ತಿರಲಿಲ್ಲ.

ಕವಿಗೆ ಪ್ರಸ್ತುತವಾದ ವರ್ಣನೆಯನ್ನು ರಂಜಿತಗೊಳಿಸಲಿಕ್ಕೆ ರಮ್ಯವಾಗಿಸಲಿಕ್ಕೆ ಕಣ್ಣಾರೆ ಕಂಡ ಅನುಭವವೇ ಆಗಬೇಕೆಂದಿಲ್ಲ. ಪರೋಕ್ಷ ಅನುಭವವೂ ಆ ಕೆಲಸ ಮಾಡಬಹುದು. ಶ್ರೀ ಕೃಷ್ಣನ 'ರಾಸಲೀಲೆ' ಯನ್ನು ನಾವು ಕೇಳಿ

ಅರಿಯದಿಲ್ಲ; ಮನದ ಕಣ್ಣಿಂದ ಕಾಣದಿಲ್ಲ. ಅಂಥ ಆ ರಾಸಕ್ರೀಡೆಯ ಅನುಭವವೇ ಇನ್ನೊಂದು ಸಂದರ್ಭದಲ್ಲಿ ರಾತ್ರಿಯ ವರ್ಣನೆಗೆ ನೆರವಾಗಿದೆ.

ನಕ್ಷತ್ರಗಣ ಮಿನುಗುತ್ತಿದೆ. ಅವುಗಳ ನಡುವೆ ಚಂದ್ರ ಕಣ್ ಸೆಳೆವಂತೆ ಹೊಳೆಯುತ್ತಿದ್ದಾನೆ. ಸುತ್ತಲೂ ಮೌನ. ಹಿತಕರವಾದ ಬೆಳುದಿಂಗಳು. ಇಂಥ ಮೋಹಕವಾದ ರಾತ್ರಿಯ ವರ್ಣನೆಯನ್ನು ಇಂತು ಮಾಡಲಾಗಿದೆ:

"ರಾಸಲೀಲಾಸಕ್ತ ಚಂದ್ರ-ಪದ-ಸ್ಪರ್ಶನಕೆ
ಬಾನು ತಾನಾಯಿತ್ತು ಬೃಂದಾವನ!
ಮೌನ ಮುರಲೀಗಾನ: ಮಧು-ಚಂದ್ರಿಕಾಪಾನ;
ಗೋಪಿಕಾ ತಾರೆಯರೊ ಚಂದ್ರಿಲೀನ!

(ಎಂ. ಅಕಬರ ಅಲಿ)

ಈ ಕಾರಣಕ್ಕಾಗಿಯೇ ಕವಿಯಲ್ಲಿ ಕಲ್ಪನಾಶಕ್ತಿಯ ಅರಳುವಿಕೆಗೆ ಕಾರಣೀಭೂತವಾದ ಜೀವನಾನುಭವ ತೀವ್ರ ಸ್ವರೂಪದ್ದೂ, ಅದ್ಭುತ ರಮ್ಯವಾದುದೂ ಇದ್ದಿರಬೇಕಾಗುತ್ತದೆ. ಆದಿದ್ದಾಗ ಮಾತ್ರ 'ಕಲ್ಪನಾಶಕ್ತಿ' ತನ್ನ ಕಾರ್ಯದಲ್ಲಿ ಹೆಚ್ಚಿನ ಯಶಸ್ಸನ್ನು ಪಡೆಯಬಹುದಾಗಿದೆ.

ಕೆಲವೊಂದು ಕವಿಗಳಿಗೆ ತಮ್ಮದೇ ಆದ ಒಂದು ಪರಿಮಿತಿ ಇರುತ್ತದೆ. ಕೆಲವರು ಕೇವಲ ಶೃಂಗಾರ ಪದ್ಯ ಬರೆಯುತ್ತಾರೆ; ಇನ್ನು ಕೆಲವರು ಪೌರಾಣಿಕ ವಸ್ತುಗಳಿಗೇ ಶರಣು ಹೋಗುತ್ತಾರೆ; ಬೇರೆ ಕೆಲವರು ಸಾಮಾಜಿಕ ಸಮಸ್ಯೆಗಳಿಗೆ ಅಂಟಿಕೊಳ್ಳುತ್ತಾರೆ. ಇದು ಅವರವರ ಅನುಭವದ ಪರಿಮಿತಿಯನ್ನು ತೋರಿಸುತ್ತದೆ. ಅನುಭವವೇ ಪರಿಮಿತವಾದಾಗ ಅವರ ಕಲ್ಪನಾಶಕ್ತಿಯ ವಿಲಾಸವೂ ಸೀಮಿತಗೊಳ್ಳುತ್ತದೆ. ತತ್ಫಲವಾಗಿ ಕಾವ್ಯದಲ್ಲಿ ಬರಬೇಕಾದ ವೈವಿಧ್ಯ-ವಿಸ್ತಾರ ಇಲ್ಲದಾಗುತ್ತದೆ.

ಹೀಗೆ ಕಾವ್ಯ ನಿರ್ಮಿತಿಯಲ್ಲಿ ಸ್ಫೂರ್ತಿಯು ಅಲ್ಪವಾದರೂ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ. 'ಸ್ಫೂರ್ತಿ' ಬಿತ್ತಿದ ಬೀಜ ಬೆಳೆದು ಕಾವ್ಯಪುಷ್ಪ ಅರಳಬೇಕಾದರೆ ಅದಕ್ಕೆ ಅನುಕೂಲವಾದ ಮಾನಸಿಕ ಏಕಾಗ್ರತೆಯೂ ಕಲ್ಪನಾಶಕ್ತಿಯ ನೆರವೂ, ಕವಿಪಾಲಿನ ಪರಿಶ್ರಮವೂ ಅಗತ್ಯವಾಗಿರುತ್ತದೆ.

("ಪ್ರಪಂಚ", ದೀಪಾವಳಿ ಸಂಚಿಕೆ, 1960)

# ಕಾವ್ಯದ ನಂದಾ ದೀಪ

ಸಾಮಾನ್ಯವಾಗಿ 'ನಂದಾದೀಪ' ವೆಂದರೆ ದೇವರೆದುರಿಡುವ ದೀಪ. ಆದರಿದರ ಮೂಲಾರ್ಥ ನಂದದೆ ಉರಿವಂಥ ದೀಪ. ಈ ವಿಶೇಷಾರ್ಥದಲ್ಲಿಯೇ ಈ ಪದವನ್ನಿಲ್ಲಿ ಕಾವ್ಯಕ್ಕೆ ಅನ್ವಯಿಸಿ ಬಳಸಲಾಗಿದೆ. ವಿಶ್ವದೇಗುಲದಲ್ಲಿ ಜನತಾ ಜನಾರ್ಧನನೆದುರಿಟ್ಟ ನಂದಾದೀಪವೇ ಕಾವ್ಯವಾಗಿದೆಯೆಂದು ಬೇಕಾದರೆ ಬಗೆಯ ಬಹುದಾಗಿದೆ.

ಸೃಷ್ಟಿಕರ್ತನಾದ ಬ್ರಹ್ಮನನ್ನು 'ಕವಿ' ಯೆಂದು ಕರೆದುದು ಅರ್ಥಪೂರ್ಣ ವಾಗಿದೆ. ಬ್ರಹ್ಮಸೃಷ್ಟಿಯ ಅಪೂರ್ವ ಕೃತಿಯಾದ ಸೂರ್ಯ ಸದಾ ಪ್ರಜ್ವಲಿಸುವ ಜ್ಯೋತಿಯಾಗಿದ್ದಾನೆ, 'ನಂದಾದೀಪ' ವಾಗಿದ್ದಾನೆ. ಜೀವ-ಜಗತ್ತಿನ ಬಾಳು-ಬದುಕು ಅವನನ್ನೇ ಆಶ್ರಯಿಸಿದೆ. ಅವನ ಕೃಪೆಯಿಂದಲೇ ಅದರ ಅಂತಃಕರಣ ಅರಳುತ್ತದೆ- ಗಿಡ-ಬಳ್ಳಿ ಮೊಳೆತು-ಬೆಳೆದು ಹೂ-ಹಣ್ಣು ನೀಡುತ್ತವೆ. ಹೀಗೆ ಸೃಷ್ಟಿಯ ಬದುಕು ಸುಂದರವೂ ಸಾರ್ಥಕವೂ ಆಗಿ ಪರಿಣಮಿಸುತ್ತದೆ.

ಅಂಥದೇ ಕಾರ್ಯವನ್ನು ಕಾವ್ಯವೂ ಮಾಡುತ್ತದೆ. ಅದು ಮಾನವ ಲೋಕದ ನೋವು-ನಿರಾಸೆಗಳನ್ನು ಚೆದುರಿಸುತ್ತದೆ. ಹರುಷದ ಹೊಂಬೆಳಕನ್ನು ತೂರಿ, ಜೀವನಕ್ಕೆ ನವಚೈತನ್ಯವನ್ನು ನೀಡುತ್ತದೆ. 'ಸುಮನ'ಗಳನ್ನು ಅರಳಿಸಿ, ಅವು ಸುಗಂಧ ಬೀರುವಂತೆ ಮಾಡುತ್ತದೆ. ಎಂತಲೇ ಕಾವ್ಯವನ್ನು 'ನಂದಾದೀಪ' ಎಂದು ಕರೆಯಬಹುದಾಗಿದೆ.

ಇಧಿಲ್ಲಿ 'ದೀಪ' ವೆಂಬ ಪದ ಇನ್ನೊಂದು ದೃಷ್ಟಿಯಿಂದಲೂ ಔಚಿತ್ಯ ಪೂರ್ಣವಾಗಿದೆ. 'ಬೆಂಕಿ' ಯಿಂದ ಭಿನ್ನವಾದ ಇದು ಬೆಳಕನ್ನು ನೀಡುವ ಒಂದು ದಿವ್ಯ ಸಾಧನ. ಅದೇ ಮೇರೆಗೆ ಕಾವ್ಯವೂ ಕೂಡ ಲೋಕಕ್ಕೆ ಬೆಳಕು ನೀಡುವ 'ದೀಪ' ವಾಗಿದೆ. ಅಂಥ ಕಾರ್ಯ ನೆರವೇರಿಸಿದಲ್ಲಿ ಮಾತ್ರ ಕಾವ್ಯವೆಂಬುದು ಸಾರ್ಥಕವಾಗುವುದೆಂಬ ಅರ್ಥವೂ 'ನಂದಾದೀಪ' ವೆಂಬುದರಲ್ಲಿ ಸೂಚಿತವಾಗದಿಲ್ಲ.

ಇಂತು ನಂದಾದೀಪವಾದ ಕಾವ್ಯ ತನ್ನ ಗುರಿಯನ್ನು ಹೇಗೆ ಸಾಧಿಸುತ್ತದೆ. ತನ್ನ ಕಾರ್ಯವನ್ನು ಹೇಗೆ ನೆರವೇರಿಸುತ್ತದೆ ಎಂಬುದನ್ನು ನಾವಿದೀಗ ನೋಡೋಣ.

ಕಾವ್ಯಕ್ಕೆ ಬೇಕಾದ ಮೂಲಧನವನ್ನು ಕವಿಯು ಜೀವನಾನುಭವದಿಂದಲೂ ನಿಸರ್ಗವೈಭವದಿಂದಲೂ ಹೊಂದುತ್ತಾನೆ. ಈ ಜೀವನಾನುಭವವು ಮಾನವನ ಪ್ರತ್ಯಕ್ಷ ಅನುಭವವಾಗಿರಬಹುದು. ಪರೋಕ್ಷ ಅನುಭವವಾಗಿರಲೂ ಬಹುದು. ಏನಿದ್ದರೂ ಇದು ಮೌಲಿಕವೂ ತೀವ್ರ ಸ್ವರೂಪದ್ದೂ ಆಗಿದ್ದರೆ ಆಯಿತು, ಕಾವ್ಯಕ್ಕೆ ಒಗ್ಗುತ್ತದೆ.

ಇನ್ನು ನಿಸರ್ಗ ವೈಭವದ ಪ್ರಶ್ನೆ. ಕವಿಯು ನಿಸರ್ಗ ವೈಭವಕ್ಕೆ ಕನ್ನಡಿ ಹಿಡಿಯುವ ಕೆಲಸ ಮಾಡುತ್ತಾನೆಂದು ಸಾಮಾನ್ಯವಾಗಿ ಅನಿಸುತ್ತದೆ. ಆಲೋಚಿಸಿದಲ್ಲಿ ಅದಷ್ಟೆ ಅವನ ಕಾರ್ಯವಲ್ಲವೆಂಬುದು ತಿಳಿದು ಬರದಿರದು. ಕನ್ನಡಿಯಂತೆ ನಿರ್ಲಿಪ್ತವಾದ ಕಾರ್ಯ ನೆರವೇರಿಸುವದು ಕವಿಯಾದವನಿಗೆ ಸಾಧ್ಯವೇ ಇಲ್ಲ. ಕವಿಯೂ ಮಾನವನೇ. ಅವನಿಗೂ ಅವನವೇ ಆದ ಆಶೆ-ಆಕಾಂಕ್ಷೆಗಳಿವೆ, ಒಲವು-ನಿಲವುಗಳಿವೆ. ಕಾಣುವ ಕಣ್ಣಿದೆ, ಮೆಚ್ಚುವ ಮನವಿದೆ. ಇವುಗಳೆಲ್ಲದರ ಒಟ್ಟಂದದ ಪರಿಣಾಮವಾಗಿ ಅವನು ಕಂಡ ನಿಸರ್ಗದೃಶ್ಯದ ಚಿತ್ರಣ ಅವನ ವ್ಯಕ್ತಿತ್ವದಿಂದ ವರ್ಣರಂಜಿತವಾಗುತ್ತದೆ. ಅರ್ಥಾತ್ ಮಾನವೀಯ ಕಣ್ಮನದ ಬಣ್ಣದಲ್ಲಿ ಮಿಂದೇ ನಿಸರ್ಗವು ಕಾವ್ಯದಲ್ಲಿ ಪಡಿಮೂಡುತ್ತದೆ. ಇದನ್ನೆ ನಾವು ಕವಿಯ ದರ್ಶನ ಅನ್ನುತ್ತೇವೆ. ಈ ಕವಿದರ್ಶನಕ್ಕೆ ಸದಾಶಯವೇ ಉಸಿರಾಗಿರಬೇಕು; ಶಿವಭಾವವೇ ಜೀವವಾಗಿರಬೇಕು. ಅಂದಾಗ ಮಾತ್ರ ಅದು ನಿಜವಾದ ಸಾರ್ಥಕವಾದ ಕಾವ್ಯವೆನಿಸುತ್ತದೆ.

ಹೀಗೆ ಸತ್ಯಾನುಭವವು ಶಿವದರ್ಶನದಲ್ಲಿ ಮಿಂದು ಸುಂದರವಾದ ರೀತಿಯಲ್ಲಿ ಅದೆಂತು ಅಭಿವ್ಯಕ್ತಿಗೊಳ್ಳುವುದೆಂಬುದನ್ನು ನೋಡೋಣ. ಕವಿ ಕುವೆಂಪು ಬರೆದ 'ಸ್ವಾತಂತ್ರ್ಯೋತ್ಸವ ಮಹಾಪ್ರಗಾಥಾ' ದಲ್ಲಿಯ, ಗಾಂಧೀಜಿಯುವರಿಗೆ ಅನ್ವಯಿಸುವ ಕಾವ್ಯಭಾಗವನ್ನು ತೆಗೆದುಕೊಳ್ಳೋಣ.

"ಹೆಜ್ಜೆ ಹೆಜ್ಜೆಯನಿಡಿಸಿ, ಕೈಹಿಡಿದು ನಡೆಗಲಿಸಿ
ಬಿಡುಗಡೆಗೆ ತಂದ ಆ ತಂದೆಯೆಲ್ಲಿ?
ಎಲ್ಲಿ ಓ, ಅವನೆಲ್ಲಿ ನಿಚ್ಚವೂ ನಮ್ಮೆದೆಯ
ನಂಜುಂಟುವಾ ನೀಲಕಂಠನೆಲ್ಲಿ?"

೧೯೪೭ರ ಆಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯ ಹೊಂದಿತು. ಅಂದಿನ ಆ ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ ದಿಲ್ಲಿಯ ಮಹೋತ್ಸವದಲ್ಲಿ ಭಾಗವಹಿಸಲು ರಾಷ್ಟ್ರಪಿತ ಗಾಂಧೀಜಿಯುವರಿಗೆ ಆಗಲಿಲ್ಲ. ಆಗ ಅವರು ಹಿಂದೂ-ಮುಸ್ಲಿಮ್ ದಂಗೆಯ ಅನಪೇಕ್ಷಿತ ಅನಾಚಾರ-ಅತ್ಯಾಚಾರ ಪರಂಪರೆಗಳನ್ನು ತೊಡೆದು ಹಾಕಲು, ಕಷ್ಟಕ್ಕೀಡಾದ ಜನತೆಗೆ ಸಾಂತ್ವನ ನೀಡಲು ನೌಖಾಲಿ ಜಿಲ್ಹೆಯಲ್ಲಿ ಸಂಚಾರ ಕೈಗೊಂಡಿದ್ದರು.

ಇಂಥ ಸರ್ವಸಾಮಾನ್ಯವಾದ ಲೋಕಾನುಭವದ ನಿರೂಪಣೆಯಲ್ಲಿಯೂ ಕವಿ ಕುವೆಂಪು ಅಸಾಮಾನ್ಯ ದರ್ಶನವನ್ನು ನೀಡಿದ್ದಾರೆ. ಅವರು ಬಳಸಿದ 'ನೀಲಕಂಠ'ವೆಂಬ ಪದ ಅರ್ಥಭಾರದಿಂದ ಬಳಕುತ್ತಿದೆ. 'ನೀಲಕಂಠ' ವೆಂದೊಡನೆ, ಶಿವನ ವಿರಾಟ್ ಮೂರ್ತಿಯೂ, ಆತ 'ನೀಲಕಂಠ' ನಾಗಬೇಕಾಗಿ ಬಂದ ಪೂರ್ವ ಘಟನೆಯ ಅಪೂರ್ವ ಚಿತ್ರಮಾಲಿಕೆಯೂ ನಮ್ಮ ಕಣ್ಣೆದುರು ಹಾದು ಹೋಗುತ್ತದೆ. ಅದರೊಡನೆ ಗಾಂಧೀಜೀಯುವರ ಜೀವನ ಚಿತ್ರವೂ ಸಮರಸವಾಗಿ ನಮ್ಮ ಹೃದಯದ ಕಣ್ಣು ತೆರೆಯಿಸುತ್ತದೆ.

ದೇವ-ದಾನವರು ಸೇರಿ ಅಮೃತಕ್ಕಾಗಿ ಸಮುದ್ರಮಂಥನ ಮಾಡಿದಂತೆ, ನಮ್ಮ ನಾಡಿನಲ್ಲಿ ಸ್ವಾತಂತ್ರ್ಯಕ್ಕಾಗಿ ಸಂಗ್ರಾಮ ನಡೆಯಿತು. ಆ ಅವರಿಗೆ ಅಮೃತದೊಡನೆ ಬ್ರಹ್ಮಾಂಡವನ್ನೇ ಕಬಳಿಸುವ ಕಾಲಕೂಟ ಪಾಲಿಗೆ ಬಿದ್ದಂತೆ, ನಮಗೆ ಸ್ವಾತಂತ್ರ್ಯದ ಅಮೃತದೊಡನೆ ಜಾತೀಯ ದಂಗೆಗಳಿಂದುಂಟಾದ ದುಃಖ-ದುಮ್ಮಾನದ ಕಾಲಕೂಟ ವಿಷ ಉಣ್ಣಬೇಕಾದ ದುಸ್ಥಿತಿಯೊದಗಿತು! ಅಲ್ಲಿ ದೇವತೆಗಳೆಲ್ಲ ಅಮೃತ ಸೇವಿಸಿ ಭೋಳೆ ಶಂಕರನ ಪಾಲಿಗೆ ಕಾಲಕೂಟ ವಿಷ ಬಿಟ್ಟುಕೊಟ್ಟರೆ, ಇಲ್ಲಿ ನಮ್ಮಲ್ಲಿ ಪುಢಾರಿಗಳು - ಧುರೀಣರೆಲ್ಲ ಸ್ವಾತಂತ್ರ್ಯ ಸುಖ ಸವಿಯಲನುವಾದರು! ಜಾತೀಯ ದಂಗೆಗಳಿಂದ ತತ್ತರಿಸುವ ಜನತೆಯ ದುಃಖ-ದುಮ್ಮಾನ ನಿತ್ತರಿಸುವ ದುರ್ಧರ ಹೊಣೆ ಗಾಂಧೀಜಿಯುವರ ಪಾಲಿಗೆ ಬಂತು. ಇಂಥ ವಿರಾಟ್ ಚಿತ್ರವನ್ನು ಕೆರಳಿಸುವ ಈ ಕಾವ್ಯಭಾಗ ಮಹೋನ್ನತಿವೆತ್ತುದಾಗಿದೆಯೆಂದು ಬೇರೆ ಹೇಳಬೇಕಿಲ್ಲ. ಪ್ರಸ್ತುತ ಸಂದರ್ಭದಲ್ಲಿ ಇದನ್ನು ಉದ್ಧರಿಸುವ ಕಾರಣವಿಷ್ಟೆ; ಕವಿ ಜೀವನಾನುಭವವನ್ನು ನಮ್ಮ ಮನಂಬುಗುವ ರೀತಿಯಲ್ಲಿ ಅಭಿವ್ಯಕ್ತ ಮಾಡುವಲ್ಲಿ ತನ್ನದೊಂದು ಜೀವನದರ್ಶನವನ್ನು ನೀಡುತ್ತಾನೆ ಎಂಬುದು. ಗಾಂಧೀಜಿಯುವರ ವ್ಯಕ್ತಿತ್ವದ ಹಿರಿಮೆಯನ್ನು ಕವಿ ಅದೆಷ್ಟು ಸೂಚ್ಯವಾಗಿ-ಸಾರ್ಥಕವಾಗಿ ಬಿಂಬಿಸಿದ್ದಾನೆ ಇಲ್ಲಿ! ಇಂಥ ಅರ್ಥದಲ್ಲಿಯೇ ಕಾವ್ಯ ನಂದಾದೀಪವಾಗಿದೆಯೆಂದು ಹೇಳುವದು.

ಇದೇ ಮೇರೆಗೆ ನಿಸರ್ಗದ ಚೆಲುವಿಕೆಯ ವರ್ಣನೆಯೊಂದಿಗೆ ಕವಿ

ಲೋಕಕ್ಕೆ ನೀಡುವ ಬೆಳಕೂ ಅಸಾಮಾನ್ಯವಾಗಿರುತ್ತದೆ. ಈ ದೃಷ್ಟಿಯಿಂದ ಕವಿ ಬೇಂದ್ರೆಯವರು 'ಮೇಘದೂತ' ಕಾವ್ಯಕ್ಕೆ ಪೂರ್ವಪೀಠಿಕೆಯಾಗಿ ಬರೆದ ಪದ್ಯವೊಂದನ್ನು ಅವಲೋಕಿಸೋಣ:

"ಮಣ್ಣು ಹೆಣ್ಣು ಬಾನೊಡೆಯನಿಂದ ಅಗಲಿಹಳನಾದಿಯಿಂದ
ವಿರಹ ಬವಣೆಯಲ್ಲಿ ತಿರುಗೆತಿರುಗುವಳು ಹೊತ್ತುಸುತ್ತಿನಿಂದ
ಕಣ್ಣನೀರು ಕಡಲಾಗಿ ಕಾವು ಉಗಿಯಾಗಿ ಮೇಲೆ ಹೋಗಿ
ಎದೆಗೆ ಉದ್ಘರೆ ಬಾನಿಂದೆ ನವಿರುವಳು ಹೃದಯ ಹಚ್ಚನಾಗಿ"

"ಒಂದೊಮ್ಮೆ ಒಲವಿನ ದಂಪತಿಗಳಾಗಿದ್ದ ಭೂದೇವಿ ಆಕಾಶರಾಜರು ಅದಾವುದೋ ಕಾರಣಕ್ಕಾಗಿ ವಿರಹಕ್ಕೆ ಗುರಿಯಾಗಬೇಕಾಯ್ತು; ಹೆಣ್ಣು ಹೃದಯದ ಭೂದೇವಿ ವಿರಹದ ಬವಣೆಯಲ್ಲಿ ಹುಚ್ಚಿಯಾಗಿ ಸುತ್ತತೊಡಗಿದಳಂತೆ; ಅದೇ ಅವಳ ದೈನಿಕ ಗತಿ! ಅವಳು ಉದುರಿಸಿದ ಕಂಬನಿಯ ಕಡಲು ವಿರಹಬೇಗೆಯಿಂದ ಉಗಿಯ ರೂಪು ಧರಿಸಿ; ಮುಂದೆ ಮೋಡವಾಗಿ ಅವಳ ಸಂದೇಶವನ್ನು ಆಕಾಶರಾಜನಿಗೆ ಮುಟ್ಟಿಸುತ್ತದೆ. ಪ್ರೇಯಸಿಯ ಆ ಪ್ರಿಯ ಸಂದೇಶ ತಲುಪಿ ಆಕಾಶ-ರಾಜ ಹರ್ಷಬಾಷ್ಪಗಳನ್ನು ಉದುರಿಸುತ್ತಾನಂತೆ! ಅದೇ ಮಳೆ! ಆ ಮಳೆ ಭೂಮಿಯ ಮೇಲೆ ಬೀಳುತ್ತದೆ. ಅದುವೇ ನಲ್ಲನಿಂದ ನಲ್ಲೆಗೆ ಬಂದ ಪ್ರತಿಸಂದೇಶವಂತೆ! ಆಗ ವಿರಹದುರಿಯಲ್ಲಿ ಬೆಂದುಹೋಗಿದ್ದ ಬುವಿಗೆ ಹಿಡಿಸಲಾರದಷ್ಟು ಹಿಗ್ಗಾಗುತ್ತದೆ. ಮೈ ರೋಮಾಂಚನಗೊಳ್ಳುತ್ತದೆ. ಅದೇ ಬೆಳೆ!"

ಇಲ್ಲಿ ನಿಸರ್ಗ ಪ್ರಕ್ರಿಯೆಯೊಂದು ಚಿತ್ರಿತವಾಗಿರುವುದೇನೋ ಸರಿಯೆ. ಆದರೆ ಅದರ ಜತೆ ಜತೆಗೇ–ನಮಗರಿವಿಲ್ಲದಂತೆಯೇ–ಜೀವನತತ್ವವೊಂದರ ಮೇಲೆ ಕವಿ ಬೆಳಕು ಚೆಲ್ಲಿದ್ದಾನೆ. ಗಂಡು-ಹೆಣ್ಣಿನ ಪ್ರೇಮ ಅನಾದಿಯಾದದು, ಅನಿವಾ-ರ್ಯವಾದುದು. ಅವರು ಸುಖದ ಸ್ವರ್ಗದಲ್ಲಿ ಬದುಕಿದರಂತೂ ಸರಿಯೆ. ಬದಲಾಗಿ, ಪರಿಸ್ಥಿತಿಯ ಇರುಕಿನಲ್ಲಿ ಸಿಕ್ಕು, ಅಗಲಿದರೂ ಅವರ ಪ್ರೇಮ ಅದೆಂತು ಅಮರವಾಗಿದೆ! ಅದೆಂತು ಅವರ ಸ್ನೇಹ-ಸಂಪರ್ಕ ಉಳಿದುಕೊಂಡು ಬಂದಿದೆ! ಇದು ಬದುಕಿನಲ್ಲಿ ದಾರಿದೀಪವಾಗಬಹುದಾದ ಬೆಳಕಿನ ಸೆಳೆ, ಅಲ್ಲವೆ?

ಈ ಕಾರಣಕ್ಕಾಗಿಯೇ ಕಾವ್ಯ-ಜೀವಾನಾನುಭವವನ್ನೇ ಚಿತ್ರಿಸಲಿ, ನಿಸರ್ಗ ವೈಭವವನ್ನೇ ಚಿತ್ರಿಸಲಿ–ತನ್ನ ಸದಾಶಯಪೂರಿತ ದರ್ಶನ ವಿಶೇಷದಿಂದ ಎಂದಿಗೂ ನಂದಾದೀಪವೇ ಆಗಿದೆಯೆಂದು ಹೇಳಬಹುದಾಗಿದೆ.

ಈ ಆಶಯವನ್ನೆ ಕವಿ ವಿನಾಯಕರು ತಮ್ಮ 'ರೇಡಿಯೋ' ಎಂಬ ನವ್ಯ ಕವಿತೆಯಲ್ಲಿ ಪರ್ಯಾಯವಾಗಿ ಒಡನುಡಿದಂತಿದೆ:

"ಹೇಳು ನಿನ್ನ ಕಥೆಯ ಹೇಳು,
ರಸಮಯವಾಗಲಿ ಬಾಳು.
ಮನೆಗದೊಂದು ಹೊಸತು ಹೊಗರು,
ಎದೆ ಬಳ್ಳಿಗೆ ಹೊಸತು ಚಿಗುರು,
ಕಿರಿಯರ ಹುರಿದುಂಬಿಸು,
ನಮ್ಮೆದೆ ಮನತುಂಬಿಸು.
ಅಲೆಯಂಚಿಯ ಕಾಸಾರ,
ಹೊಸ ರಕುತದ ಸಂಸಾರ!
ನಂದಾದೀಪವಾದ ಮಿಂಚೆ,
ಕರ್ಣಾಮೃತದೊಳಸಂಚೆ!"

ರೇಡಿಯೋ ಕುರಿತು ಹೇಳಿದ ಈ ಮಾತು ಕಾವ್ಯಕ್ಕೆ ಬಹು ಸೊಗಸಾಗಿ ಅನ್ವಯಿಸುತ್ತವೆ.

('ಸಂಗಮ' ಕನ್ನಡ ಡೈಜೆಸ್ಟ್, ಜನವರಿ 1961)

# ಬಸವಣ್ಣನವರ ಎರಡು ವಚನ:

ಬಸವಣ್ಣನವರ ಎರಡು ಜನಪ್ರಿಯ ವಚನಗಳನ್ನು ಆಯ್ದುಕೊಂಡು ಅವುಗಳಲ್ಲಿಯ ಸಾಂಕೇತಿಕತೆಯನ್ನು ಗುರುತಿಸಿ, ವಿಶ್ಲೇಷಿಸಿ, ಸೊಗಸನ್ನು ವಿವರಿಸುವ ಒಂದು ಪ್ರಯತ್ನ ನಾನಿಲ್ಲಿ ಮಾಡಲಿದ್ದೇನೆ.

ಬಸವಣ್ಣನವರು ಮೂಲತಃ ಮುಖ್ಯತಃ ಭಕ್ತಿಭಾಂಡಾರಿ. ಭಕ್ತಿ ಪ್ರೇರಿತರಾಗಿ ಅವರು ನುಡಿದ ಒಂದೊಂದು ನುಡಿ, ಸ್ಫೂರ್ತಿಯ ಕಿಡಿ. ಅಂಥ ಅನುಪಮ 'ನುಡಿ'ಯ ಆಶಯ-ಆದರ್ಶಗಳನ್ನು ಅರ್ಥಪೂರ್ಣವಾಗಿ ಪಡಿನುಡಿಯುವ ಒಂದು ವಚನ ಹೀಗಿದೆ:

"ನುಡಿದರೆ ಮುತ್ತಿನ ಹಾರದಂತಿರಬೇಕು:
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು.
ನುಡಿದರೆ ಲಿಂಗ ಮೆಚ್ಚಿ 'ಅಹುದಹುದೆ' ನಬೇಕು.
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲ ಸಂಗಮದೇವನೆಂತೊಲಿವನಯ್ಯಾ?"

ಕೂಡಲ ಸಂಗಮದೇವನ ಮೆಚ್ಚಿಕೆಯನ್ನುಗಳಿಸುವದೇ ಬಸವಣ್ಣನವರ ದೃಷ್ಟಿಯಲ್ಲಿ ಭಕ್ತನ ಬಾಳು-ಬದುಕಿನ ಗೊತ್ತು-ಗುರಿ. ಅದು ಸಾಧ್ಯವಾಗಬೇಕಿದ್ದಲ್ಲಿ ಆ ಭಕ್ತನ ನಡೆ-ನುಡಿಗಳಲ್ಲಿ ಒಂದು ಮೇಳ ಒಂದು ಹೊಂದಾಣಿಕೆ ಅಗತ್ಯ; ಅಂದರೆ ಆತನ ನಡೆ, ನುಡಿಗೆ ಅನುಗುಣವಾಗಿರಬೇಕು. ಹಾಗಾದರೆ ಆ ನುಡಿಯ ಬಗೆ-ಬಿನ್ನಾಣ ಯಾವುದು? ಬಸವಣ್ಣನವರು ಎಷ್ಟೊಂದು ಸೊಗಸಾದ ರೀತಿಯಲ್ಲಿ ಸಮರ್ಪಕವಾದ ಉಪಮೆ-ಅಲ್ಲ, ಪ್ರತೀಕಗಳನ್ನು-ಬಳಸಿ ಅದನ್ನು ತಿಳುಹಿದ್ದಾರೆ ನೋಡೋಣ.

ಭಕ್ತಹೃದಯವೇ ಒಂದು ಸಿಂಪೆಯಾದರೆ, ಶಿವಕೃಪೆಯೇ ಸ್ವಾತಿಯ ಮಳೆಹನಿ. ಆ 'ಹನಿ'ಯೇ ಭಕ್ತನ ಅಂತರಂಗದ ಬಣ್ಣ-ಬೆಳಕು-ಕಾವುಗಳಲ್ಲಿ ಕಾದು ಕುದ್ದು ನುಡಿಮುತ್ತಾಗಿ ರೂಹುಗೊಂಡು ಹೊರ ಹೊಮ್ಮಬೇಕು. ನಯ-ನುಣುಪು, ಬಿಳುಪು-ಬಿಣ್ಪು ಆ ನುಡಿ ಮುತ್ತಿನ ಶೀಲ ಸ್ವಭಾವವಾಗಬೇಕು. ಅದು ಆಕೃತಿಗೊಳ್ಳುವಲ್ಲಿ ಸಹಜ ಸರಳ ಸೌಂದರ್ಯಕ್ಕೆ ಆಗರವಾಗಿರಬೇಕು. ಅಂಥ ಒಂದೊಂದು ನುಡಿ-ಮುತ್ತು ಬಿಡಿ ಬಿಡಿಯಾಗಿ ಹೊರಬಂದು ಶಿವಭಕ್ತಿಯ ಅಂತಃಸೂತ್ರದಲ್ಲಿ ಹೆಣೆದುಕೊಂಡು, ಒಪ್ಪ-ಓರಣಗೊಂಡು ಲಿಂಗಕ್ಕೆ 'ಹಾರ' ವಾಗಬೇಕು.

ಶಿವಭಕ್ತನ ನುಡಿ ಇಂಥ 'ಮುತ್ತಿನಹಾರ' ಮಾತ್ರವಲ್ಲ, 'ಮಾಣಿಕ್ಯದ ದೀಪ್ತಿ' ಯೂ ಆಗಬೇಕು; ಕೆಂಬಣ್ಣದ ಕಿರಣ ತೀಡಿ, ಮಂಗಳದ ಪ್ರಭೆ ಹರಡಿ ಲಿಂಗಕ್ಕೆ 'ದೀಪ್ತಿ' ಯಾಗಬೇಕು.

ಇಷ್ಟೇ ಅಲ್ಲ, ನುಡಿ ಸ್ಫಟಿಕದ ಪಾರದರ್ಶಕತೆಯನ್ನು ಮೈಗೂಡಿಸಿಕೊಳ್ಳ ಬೇಕು: ಅಂದರೆ ಮಾತಿನ ಮರೆಯ ಮನದ ಹೊಲಬು-ಹೊಗರು ಆ ನುಡಿಯಲ್ಲಿ ಪಡಿಮೂಡಬೇಕು. ಒಳಗನ್ನು ಹೊರಗೆ ಹೊಳೆಯಿಸುವ ಶೀಲ ಅದರದಾಗಬೇಕು. ಅಂದಾಗಲೇ ಆ ನುಡಿ 'ಲಿಂಗ' ಕ್ಕೆ ಸಮರ್ಪಿತವಾಗುವ 'ಸ್ಫಟಿಕದ ಸಲಾಕೆ' 'ಬೆಳ್ಳಿಯ ಬೆತ್ತ' ಆಗಬಲ್ಲುದು.

ಇಂಥ ಒಂದು ಅರ್ಥಸಂಪತ್ತು ಇಲ್ಲಿಯ ಒಂದೊಂದು ಉಪಮೆಯಲ್ಲಿ ಗೂಡುಕಟ್ಟಿದೆ. ಇನ್ನೊಂದು ಅರ್ಥದ ಸ್ತರವೂ ಇಲ್ಲಿ ಇಲ್ಲದಿಲ್ಲ.

ಆತ್ಮೋನ್ನತಿಯ ದಾರಿಯಲ್ಲಿ, ಮನದ ಅರಳಾಗಿ ನಡೆಯ ತಿರುಳಾಗಿ ಹೊರಬರುವ ಭಕ್ತನ ನುಡಿ 'ಮುತ್ತು-ಮಾಣಿಕ' ಆಗುವದು ಒಂದು ಮಟ್ಟು, ಒಂದು ಘಟ್ಟ. ಆಗ ಅದಕ್ಕಿನ್ನೂ ತನಗಂಟಿದ ಒಂದು ಬಣ್ಣ ಇದ್ದಿರುತ್ತದೆ. ಆತ್ಮ ಶುದ್ಧಿ ಸೂಚಿಸುವ ಬೆಳ್ಳಿಬಣ್ಣ, ಕಲ್ಯಾಣಭಾವದ ಕೆಂಪುಬಣ್ಣ. ಅದಾಗ ಇನ್ನೂ ಸಾಧಕನ ಸ್ಥಿತಿ. ಆದರೆ ಅದೇ ಮುಂದುವರಿದು 'ಸ್ಫಟಿಕ' ವಾಗುವದು ಮುಂದಿನ ಮಜಲು. ತನ್ನತನದ ಬಣ್ಣವನ್ನು ಮೀರಿದ ಅಂತಿಮದ ಅಂತಸ್ತು, ಸಿದ್ಧನ ನೆಲೆ.

ಹೀಗೆ ಈ ವಚನದಲ್ಲಿ ಅನರ್ಘ್ಯವಾದ ಅರ್ಥ ಕೆನೆಗಟ್ಟಿನಿಂತಿದೆ. ಬಸವಣ್ಣನವರಂಥ ಭಕ್ತರ ಮನೋಧರ್ಮವೇ ತನಿಯಾಗಿ ಮಿಡಿದಿದೆ. ಒಂದು ರೀತಿಯಲ್ಲಿ 'ವಚನ ಸಾಹಿತ್ಯ'ದ ಜೀವ-ಜೀವಾಳವೇ ಪ್ರತಿಬಿಂಬಿತವಾಗಿದೆ.

+ + + + +

ಬಸವಣ್ಣನವರ ಇನ್ನೊಂದು ವಚನ:

"ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು
ಎಲೆ ಹೋತೇ, ಅಳು, ಕಂಡಾ!
ವೇದವನೋದಿದವರ ಮುಂದೆ ಅಳು, ಕಂಡಾ!
ಶಾಸ್ತ್ರವ ಕೇಳಿದವರ ಮುಂದೆ ಅಳು, ಕಂಡಾ!!
ನೀನತ್ತುದಕ್ಕೆ ತಕ್ಕುದ ಮಾಡುವಾ
ಕೂಡಲ ಸಂಗಮದೇವಾ"

ಈ ವಚನ ಉಕ್ಕಿ ಬರಲು ಕಾರಣವಾದ ಸನ್ನಿವೇಶ, ಹಿನ್ನೆಲೆ ಸ್ವಯಂ ಸ್ಪಷ್ಟವಾಗಿದೆ. ಯಜ್ಞಕ್ಕೆ ಬಲಿಯಾಗಲಿದ್ದ ಹೋತವೊಂದರ ಸಂಕಟ ಕಂಡು, ಮೂಕರೋದನ ಕೇಳಿ, ಕರಗಿದ ಎದೆಯಿಂದ ಬಸವಣ್ಣನವರು ಹಾಡಿದ ವಚನ ಇದು. ವೇದ-ಶಾಸ್ತ್ರ ಬಲ್ಲಂಥವರಿಂದಲೇ ಇಂಥ ಪ್ರಾಣಿ ಹಿಂಸೆ ನಡೆಯುತ್ತಿದೆ ಯಲ್ಲಾ ಎಂಬ ನೋವು ಇಲ್ಲಿ ಮಿಡಿದಿದೆ. ಆದರೆ ಅರ್ಥ ಇಷ್ಟಕ್ಕೇ ಸೀಮಿತ ವಾಗಿಲ್ಲವೆಂದು ಅನಿಸುತ್ತದೆ.

ಇಲ್ಲಿ ಉಕ್ತವಾಗಿರುವ ಹೋತ, ಮೂಕ ಜನಸಾಮಾನ್ಯರ ದೀನ-ದಲಿತರ, ಒಂದು ಪ್ರತೀಕ. ಸಮಾಜದ ಒಂದೊಂದು ಪ್ರಭಾವಿ ಕಾರ್ಯಕ್ಷೇತ್ರಕ್ಕೆ ವಾರಸುದಾರರಾಗಿದ್ದ ಉಚ್ಚವರ್ಣದವರ (ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ) ಶೋಷಣೆಗೆ ಒಳಗಾಗಿದ್ದ ಶೂದ್ರ-ಪಂಚಮರ ಒಂದು ಸಂಕೇತ. ಮಾನವೀಯ ಸ್ಥಾನ-ಮಾನಕ್ಕೆ ಅವಕಾಶವೇ ಇಲ್ಲದ, ತಮ್ಮ ದುಸ್ಥಿತಿ-ದುರ್ಗತಿಯ ಅರಿವೇ ಇರದ, — ಪ್ರತಿಭಟಿಸಲಾರದೆ ಮೂಕವೇದನೆ ಮೂಕ ರೋದನಗಳಲ್ಲಿಯೇ ಮುಳುಗಿದ ಈ ಜನವರ್ಗ ಮೂಕ ಪಶುವಾಗಿ ಪ್ರತಿಬಿಂಬಿತವಾಗಿದೆ. ಬಸವಣ್ಣನವರ ಮಾನವೀಯ ಅನುಕಂಪ ಸಮತಾದೃಷ್ಟಿ ಇದರ ಸ್ಫೂರ್ತಿಯ ಕೇಂದ್ರ ಬಿಂದುವಾಗಿದೆ.

ಒಟ್ಟಿನಲ್ಲಿ ಬಸವಣ್ಣನವರ ಈ ವಚನಗಳೆರಡೂ, ಒಂದು ದೃಷ್ಟಿಯಿಂದ, ಪ್ರಾತಿನಿಧಿಕವಾಗಿವೆ. ಒಂದು, ಅವರ ಅಂತರಂಗದ ಒಲವಿಗೆ ಕನ್ನಡಿ; ಇನ್ನೊಂದು, ಅವರ ಬಹಿರಂಗದ ನಿಲವಿಗೆ ಮುನ್ನುಡಿ.

# ಶರಣರ ಗೋಷ್ಠಿ

೧

ಕನ್ನಡ ನಾಡಿನ ಸುವರ್ಣಯುಗವಾದ ಹನ್ನೆರಡನೆಯ ಶತಮಾನದಲ್ಲಿ ಮಹಾಮಹಿಮ ಬಸವಣ್ಣನವರು 'ಅನುಭವ ಮಂಟಪ' ಕಟ್ಟಿದರು. ಅಲ್ಲಿ "ಬಸವಣ್ಣ ಚೆನ್ನಬಸವಣ್ಣ ಪ್ರಭು ಸಿದ್ಧರಾಮದೇವರು............ಮಡಿವಾಳ ಮಾಚಿದೇವರು ಮುಂತಾದ ಪರಿಮಿತ ಶರಣ ತಿಂಥಿಣಿ ಕೂಡಿ ಸದ್‌ಗೋಷ್ಠಿ" ನಡೆಸುತ್ತಿತ್ತು—'ಶೂನ್ಯ ಸಂಪಾದನೆ'ಗಾಗಿ ಅಂದರೆ ಈ ವಿಶ್ವದ ಪರಮ ರಹಸ್ಯದ ಜಿಜ್ಞಾಸೆಗಾಗಿ. ಆದರೆ ದುರ್ದೈವದ ಗಾಳಿ-ಬಿರುಗಾಳಿಯ ಹೊಡೆತಕ್ಕೆ ಸಿಕ್ಕು ಆ ಅನುಭವ ಮಂಟಪವೆಂಬ ಅಮೃತಶಿಲಾಸೌಧ ಕುಸಿದು ಕುಪ್ಪಳಿಸಿತು; ಕಣ್ಮರೆ-ಮಣ್ಣುಮರೆಯಾಯಿತು.

ಕಾಲಾಂತರದಲ್ಲಿ ಕನ್ನಡದ ಸುದೈವ ಕಣ್ಣು ತೆರೆಯಿತು. ಶ್ರದ್ಧಾವಂತ ಶಿವಾನುಭಾವಿಗಳೂ ಸಮರ್ಥ ಪ್ರತಿಭಾಶಾಲಿಗಳೂ ಆದ ಸಂಪಾದನೆಕಾರರು ಪ್ರಾಚ್ಯ ಸಂಶೋಧಕರಂತೆ ಅವಿಶ್ರಾಂತ ಪರಿಶ್ರಮಿಸಿ, ಕುಸಿದ್ಧ ಕಟ್ಟಡದ ಒಂದೊಂದು ಕಲ್ಲು ಬಿಡಿಭಾಗಗಳನ್ನು ಅಗೆದು ತೆಗೆದು, ಸಂಗ್ರಹಿಸಿ ಸರಿಹೊಂದಿಸಿ, ಮತ್ತೆ ಆ ಅನುಭವ ಮಂಟಪದ ಕಟ್ಟಡ ತಲೆಯೆತ್ತಿ ನಿಲ್ಲುವಂತೆ ಮಾಡಿದರು. ಹಾಗೆ ತಲೆಯೆತ್ತಿದ ರಚನಾ ರೂಪದಲ್ಲಿ ಉಸಿರು ತೀಡಿ, ಅಂದಿನ ಆ ಅಮೃತ ಶಿಲಾಸೌಧವೆ ಸಜೀವವಾಗಿ ಸಾಕಾರಗೊಳ್ಳುವಂತೆ ಅದನ್ನು ಪುನಃ ಸೃಷ್ಟಿಸುವ, ಅದರ ಒಂದು ವರ್ಣೋಜ್ವಲ ಸಾಕ್ಷಿಚಿತ್ರವನ್ನೊದಗಿಸುವ ಪ್ರಾತಿಭಕಾರ್ಯ ಇಂದು ಪ್ರೊ. ಸಂ. ಶಿ. ಭೂಸನೂರಮಠ ಅವರಿಂದ ನಡೆದಿದೆ—'ಪರಾಮರ್ಶೆ'ಯಲ್ಲಿ. ಅದರ ಒಂದು ಉಜ್ವಲ ಹೊಳವು ಈ 'ಶರಣರ ಗೋಷ್ಠಿ'ಯಲ್ಲಿ ಕಾಣಸಿಗುತ್ತದೆ.

ಇಲ್ಲಿ— ಈ 'ಶರಣರ ಗೋಷ್ಠಿ'ಯಲ್ಲಿ—ಪರಾಮರ್ಶಕರು ಗೂಳೂರ "ಸಿದ್ದವೀರಣ್ಣನ ಬೆಂಬಳಿಯಲ್ಲಿ ನಡೆದು, ಶರಣರ ವಚನದೊಳಗಿಂದ ಇಣಿಕಿ ನೋಡಿ", ತಾವು ಕಂಡುದನ್ನು ಪ್ರಮಾಣಭೂತವಾಗುವಂತೆ ನಮಗೆ ಕಾಣಿಸುವ ಪ್ರಯತ್ನ ಮಾಡಿರುವುದು ಪ್ರಶಂಸನೀಯವಾಗಿದೆ. ಯಾವುದಕ್ಕೂ ಕುರುಡಾಗದ 'ತೆರೆದ ಎದೆ, ಎಚ್ಚೆತ್ತ ಬುದ್ಧಿ'ಯುಳ್ಳವರಾಗಿ 'ಜಿಜ್ಞಾಸೆಯ' ದಾರಿಯನ್ನು

ತುಳಿಯುವ ಪಣತೊಟ್ಟು. ಅದಕ್ಕೆ ಭಂಗ ಬರದಂತೆ ಅವರು ತಮ್ಮ ಗುರಿ ತಲುಪಿದ್ದು ಅತ್ಯಂತ ಸಂತೋಷದ ಸಂಗತಿಯಾಗಿದೆ. ಅವರು ತಮ್ಮ ಪರಿಶೀಲನೆಯ ಪಥವನ್ನು ತುಳಿಯುವಾಗ ಅಭ್ಯಾಸಶೀಲ ಕುಶಾಗ್ರಪಯಣಿಗರಾಗಿ ಮುಂದುವರಿದಿದ್ದಾರೆ. ಸಮಯ ಸಂದರ್ಭ ಸನ್ನಿವೇಶಕ್ಕೆ ತಕ್ಕ ಹಾಗೆ ಸಹೃದಯರಾಗಿ ಶಿವಾನುಭವ ಸೌಂದರ್ಯ ಸವಿಯುತ್ತ, ತತ್ವಜ್ಞಾನಿಯಾಗಿ, ಅದರ ಸುಳಿವು-ಹೊಳಪುಗಳನ್ನು ಸಮಾಲೋಚಿಸುತ್ತ, ವಿಚಾರವಾದಿಯಾಗಿ ಅದರ ಒಲವು-ನಿಲವುಗಳನ್ನು ವಿವೇಚಿಸುತ್ತ ನಿಂತು ಸಂತು ಮಾರ್ಗಕ್ರಮಣ ಮಾಡಿದ್ದಾರೆ. ದಾರಿಯಲ್ಲಿ ಭೆಟ್ಟಿಯಾಗುವ ಒಬ್ಬೊಬ್ಬ ಮಹಾಮಹಿಮನ ಮಹಿಮಾತಿಶಯ-ಮೂರ್ತಿತ್ವದ ಪರಿಮಳವನ್ನು ಸಂಗ್ರಹಿಸುತ್ತ, ಅವರ ಅನುಭಾವದ ಒಳಪದರುಗಳ ಕಂಚು-ಮಿಂಚುಗಳನ್ನು ಸೆರೆ ಹಿಡಿಯುತ್ತ ಹೆಜ್ಜೆ ಹಾಕಿದ್ದಾರೆ. ಪರಾಮರ್ಶಕರು ಅನುಸರಿಸಿದ ಈ ವಿಶಿಷ್ಟ ವಿಧಾನದಿಂದಾಗಿ ಇಲ್ಲಿಯ 'ನಡೆ' ನಿಧಾನವಾಗಿದೆ—ದಡ ಸೂಸಿ ಹರಿವ ಹೊಳೆಯಂತೆ; 'ನುಡಿ' ಮಂದವಾಗಿದೆ—ವಚನಗನ್ನಡದ ಕೆನೆವಾಲಿನಂತೆ.

೨

“.... ಬಸವೇಶ್ವರನ ಸಂಪಾದನೆ, ಚೆನ್ನಬಸವೇಶ್ವರನ ಸಂಪಾದನೆ, ಮಡಿವಾಳಯ್ಯಗಳ ಸಂಪಾದನೆ ಈ ಮೂರೂ ಸಂಪಾದನೆಗಳ ಸಂಬಂಧ ಅತ್ಯಂತ ನಿಕಟವಾಗಿರುವುದರಿಂದ, ಒಂದಕ್ಕೊಂದು ಪೋಷಕ ಪೂರಕವಾಗಿ ಇರುವುದರಿಂದ, ಪ್ರಭುದೇವರು ಬಸವೇಶ್ವರ ಚೆನ್ನಬಸವೇಶ್ವರ ಮಡಿವಾಳಯ್ಯಗಳೊಡನೆ ಅನುಭಾವ ಗೋಷ್ಠಿ ಮಾಡಿದ ಪ್ರಸಂಗವನ್ನು ಇಡಿಯಾಗಿ” ಈ 'ಶರಣರ ಗೋಷ್ಠಿ'ಯಲ್ಲಿ ಪರಾಮರ್ಶಿಸುವುದಾಗಿ ಪ್ರೊ. ಸಂ. ಶಿ. ಭೂಸನೂರಮಠರು ಹೇಳಿದ ಮಾತು ಯಥಾರ್ಥವಾಗಿದೆ (ಪು. 547). ಇಲ್ಲಿ ಜಿಜ್ಞಾಸೆಗೊಳಗಾದ ಅನುಭಾವದ ನಿಟ್ಟು ನಿಲುವೆ, ಹಾಸು-ಹೊಕ್ಕುಗಳೆ ಅದರ ಔಚಿತ್ಯವನ್ನು ಎತ್ತಿ ತೋರಿಸುತ್ತವೆ.

ಬಸವಣ್ಣನವರು ಮತ್ತು ಪ್ರಭುದೇವರು ನಡೆಸಿದ ಜಿಜ್ಞಾಸೆಯ ವಿವೇಚನೆ ಮೊದಲಿಗೆ ಬರುತ್ತದೆ. ಇದಕ್ಕೆ ಪೂರ್ವಪೀಠಿಕೆಯಾಗಿ ಪರಾಮರ್ಶಕರೆನ್ನುತ್ತಾರೆ. “ಇಲ್ಲಿ ನಡೆದ ಚರ್ಚೆ ಒಬ್ಬರನೊಬ್ಬರು ಹಿರಿದು ನೋಡುವ ಪರೀಕ್ಷೆಯಲ್ಲ. ಅಥವಾ ಗೆಲ್ಲ ಸೋಲದ ವಾಗ್ವಾದದ, ವಾಗ್ಯುದ್ಧದ ಮಾತೇ ಇಲ್ಲ ಈ

---

* ಪ್ರೊ. ಸಂ. ಶಿ. ಭೂಸನೂರಮಠ ಅವರ 'ಶೂನ್ಯ ಸಂಪಾದನೆಯ ಪರಾಮರ್ಶೆ' ಗ್ರಂಥದ ಅಧ್ಯಾಯವೊಂದರ ಸಮೀಕ್ಷೆ; 'ಪರಾಮರ್ಶೆ'ಯ ವಿಮರ್ಶೆಯಲ್ಲಿ ಪ್ರಕಟಿತ.

ಸಂಗೋಷ್ಠಿಯಲ್ಲಿ. ಒಬ್ಬರನ್ನೊಬ್ಬರು ಒಪ್ಪಿಕೊಂಡು ಮೆಚ್ಚಿಕೊಂಡು ಅಪ್ಪಿ-ಕೊಂಡು, ಒಬ್ಬರಿಂದೊಬ್ಬರು ಮಹಾಘನದಲ್ಲಿ ಹೆಚ್ಚು ಹೆಚ್ಚು ಬೆಳೆದು ಹಬ್ಬುತ್ತಿರುವ ದಿವ್ಯ ದೃಶ್ಯ ಈ ಸಮಗೋಷ್ಠಿಯಲ್ಲಿ ಕಂಡು ಬರುವಂತಿದೆ" (ಪು. 554). ಒರೆಗೆ ಹಚ್ಚಿ ಹೇಳುವ ಈ ಮಾತು ಓದುಗರಿಗೆ ದಾರಿದೀಪವಾಗುವಂತಿದೆ. ಈ ಸಂಗೋಷ್ಠಿಯ-ಸಮಗೋಷ್ಠಿಯ-ಸ್ವರೂಪ ಇಂತಿರುವದರಿಂದಲೇ ಇಲ್ಲಿ ಹೊಗೆ ಹಾಯದೆ ಕಿಡಿ ಕೆದರದೆ ಪರಮರಹಸ್ಯದ ಶಿವಾನುಭವ ದಳದಳವಾಗಿ ಅರಳು-ವದು, ಪರಿಶುದ್ಧ ಪರಿಮಳ ಹೊರಹೊಮ್ಮುವದು ಸಾಧ್ಯವಾಗಿದೆ.

ಈ ಮಹಾಮಹಿಮರ ಜಿಜ್ಞಾಸೆಗೆ ಮೊದಲು ಈಡಾಗುವ ವಿಷಯ 'ಆದಿ ಅನಾದಿಯ ಸಮಸ್ಯೆ', ಅಂದರೆ 'ಭಕ್ತ-ಜಂಗಮದಲ್ಲಿ ಯಾವ ತತ್ವ ಮೊದಲು? ಯಾವುದು ಹಿಂದುಗಡೆ?' ಎಂಬುದು. ಬಸವಣ್ಣ ಕಂಡುಕೊಂಡಂತೆ 'ಆದಿ ಭಕ್ತ, ಅನಾದಿ ಜಂಗಮ'. 'ಕಾಯ ಭಕ್ತ, ಪ್ರಾಣ ಜಂಗಮ'. ಏಕೆಂದರೆ "ಅನಾದಿ ಜಂಗಮ ಮಾನವನ ಭಾವ ಮನ ಪ್ರಾಣ ದೇಹದಲ್ಲಿ ಸುಳಿಯು-ದಿದ್ದರೆ ಮನದಲ್ಲಿ ಭಕ್ತ ಮೂಡು"ತ್ತಿರಲಿಲ್ಲ. (ಪುಟ 556). ಆದರೆ ಪ್ರಭು-ದೇವರು ಅದನ್ನು ಒಪ್ಪುವದಿಲ್ಲ. ಆಗ ಚೆನ್ನಬಸವಣ್ಣ ಮುಂದೆ ಬಂದು, ತನ್ನ ಸುಜ್ಞಾನದೃಷ್ಟಿಯಿಂದ ಕಂಡು ಬಸವಣ್ಣನ ಮೂಲಘನವನ್ನು ಈ ರೀತಿ ವಿವರಿಸುತ್ತಾನೆ: " 'ಲಿಂಗವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು'. ಜಂಗಮವೂ ಬಸವಣ್ಣನ ಹೊಟ್ಟೆಯಲ್ಲಿ ಹುಟ್ಟಿತ್ತು. ಬಸವಣ್ಣ ಲಿಂಗ ಜಂಗಮಕ್ಕೆ ಕೊಟ್ಟು ಕೊಂಡು ತೋರಿದರೆ ಪದಾರ್ಥ ಪ್ರಸಾದದ ಪದವಿಗೇರಿತು: ಈ ಲಿಂಗ ಜಂಗಮ ಪ್ರಸಾದಕ್ಕೆ ಮೊದಲಿಗ. ಮೂಲಕರ್ತ ಬಸವಣ್ಣ. ಇದು ನನಗೆ ಮನಗಂಡ ವಿಷಯ, ಅನುಭವ ಕಂಡ ಮಾತು." (ಪು. 573-575)

ಈ ಸಂದರ್ಭದಲ್ಲಿ ಬಸವಣ್ಣನವರೂ, ತಮ್ಮ ಪಿಂಡದ ಉದಯವನ್ನು ತಾವೇ ಕಂಡು ಹೀಗೆ ಒಡನುಡಿಯುತ್ತಾರೆ:

"..... ..... ..... ಮುನ್ನ ಮುನ್ನ ಮುನ್ನ —
ಅಂದಿಂಗೆಳೆಯ ನೀನು, ಹಳೆಯ ನಾನು;
ಮಹಾದಾನಿ ಕೂಡಲಸಂಗಮದೇವಾ"

ಹೀಗೆ 'ಆದಿ ಲಿಂಗ, ಅನಾದಿ ಬಸವಣ್ಣ' ನೆಂಬ ಅನುಭಾವದ ಹೊಳಹು ಮಿಂಚುತ್ತದೆ. ಆದಿ ಅನಾದಿಯ ಸಮಸ್ಯೆಯ ಪರಿಶೀಲನೆ ಒಂದು ಘಟ್ಟಕ್ಕೆ ತಲುಪುತ್ತದೆ. ಆ ಸಂದರ್ಭದಲ್ಲಿ ಪ್ರೊ. ಭೂಸನೂರಮಠರು ಮಾಡುವ ವಿವೇಚನೆ, ನೀಡುವ ವಿವರಣೆ ಅವರ ಪ್ರಜ್ಞಾವಂತಿಕೆ-ಪ್ರತ್ಯುತ್ಪನ್ನಮತಿಯನ್ನು ಪ್ರತಿಬಿಂಬಿಸುತ್ತದೆ:

" 'ಆದಿ ಲಿಂಗ, ಅನಾದಿ ಬಸವಣ್ಣ' ಎಂಬ ಉಕ್ತಿಯನ್ನು ಒಳಹೊಕ್ಕು ಪರೀಕ್ಷಿಸಿದರೆ ಮಾನವ ದೃಷ್ಟಿ ಮತ್ತು ಶರಣರ ದೃಷ್ಟಿ ಇಲ್ಲವೆ ತತ್ತ್ವಾನುಭಾವ ದೃಷ್ಟಿಗೆ ಅದು ಸತ್ಯ, ಶಾಶ್ವತ ಸತ್ಯವೆಂಬಂತೆ ತೋರುತ್ತದೆ. ಅದು ಹೀಗೆ: ೧. ಮನುಷ್ಯ ಹುಟ್ಟಿದ ಮೇಲೆ, ಮನುಷ್ಯನಲ್ಲಿ ಭಕ್ತಿ ಹುಟ್ಟಿದ ಮೇಲೆ ದೇವರು, ದೇವರ ಕಲ್ಪನೆ ಮನುಷ್ಯ ಪ್ರಾಣಿಯ ಹೃದಯದಲ್ಲಿ ಮಿಂಚಿದೆ. ಅಥವಾ ಮನುಷ್ಯನ ಹೃದಯ ದೇವರನ್ನು ಮಿಂಚಿದೆ. ಹೆಸರಿಲ್ಲದ ಲಿಂಗಕ್ಕೆ ಹೆಸರಿಟ್ಟವರಾರು? ಭಕ್ತ. ಮುಂದೆ ದೇವರು ಗುಡುಗಿರಬಹುದು, ಮಳೆಯಾಗಿರಬಹುದು. ಆಕಾಶದತ್ತತ್ತ ಪಾತಾಳದತ್ತತ್ತ ಬೆಳೆದಿರಬಹುದು, ಮಾನವನ ಹೃದಯ ಬುದ್ಧಿ ಅನುಭವ ಬೆಳೆ-ದಂತೆ, ದೇವರು ಮನುಷ್ಯನನ್ನು ಮೀರಿ ಬೆಳೆದಿದ್ದರೂ ದೇವರನ್ನು ಹಡೆದ ತಾಯಿ ಮಾನವ ಹೃದಯ. ಇನ್ನು ೨. ವೀರಶೈವ ತತ್ತ್ವ ಅನುಭವ ದೃಷ್ಟಿಯಿಂದ ನೋಡಿದರೆ ಶರಣ, ಚಿದಂಶ, ಚಿದಂಗ, ಚಿದಾತ್ಮಕ, ಚಿತ್‌ಸ್ವರೂಪ; ಒಂದೇ ಒಂದಾಗಿರುವ ಇರವಿನಲ್ಲಿ ಎಂದಿಗೂ ಒಂದಾಗಿರುವ ಆತ್ಮಶಕ್ತಿ ಚಿಚ್ಛಕ್ತಿ. ಯಾವುದೇ ಲಿಂಗ ಅಂಗ ಬ್ರಹ್ಮ ವಿಷ್ಣು ರುದ್ರ ಸಕಲ ಚರಾಚರ ಪ್ರಪಂಚ ವನೊಳಕೆಯೊಡೆದುದು ಈ ಚಿಚ್ಛಕ್ತಿಯಲ್ಲಿಯೇ, ಈ ಮೂಲ ಚಿತ್ತಿನ ಚಲನೆಯ-ಲ್ಲಿಯೆ. ಈ ಕಾರಣದಿಂದಲೆ ಶರಣ ಅನಾದಿ, ಲಿಂಗ ಶರಣನಿಂದಿತ್ತೀಚೆ, ಶರಣ ಗರ್ಭದಲ್ಲಿ ಲಿಂಗ ಹುಟ್ಟಿದುದು, ಶರಣಗರ್ಭದಲ್ಲಿ ಬ್ರಹ್ಮಾದಿ ದೇವತೆಗಳು ಸಕಲ ಪ್ರಪಂಚ ಒಗೆದುದು ಎಂದು ಶರಣರು ಹೇಳುವುದು." (ಪುಟ ೫೭೪-೫೭೫.)

ಈ ಬಗೆಯಲ್ಲಿ ವೀರಶೈವಧರ್ಮ ತತ್ತ್ವಾನುಭವದ ಸಿಲುಮೆಯನ್ನು ಸಿಚ್ಛಳ ಗೊಳಿಸುವುದರ ಜತೆಜತೆಗೆ ಮಾನವೀಯ ದೃಷ್ಟಿಕೋನದಿಂದ ಅರ್ಥೈಸುವ ಪ್ರಕ್ರಿಯೆ ಇಂದಿನ ವಿಚಾರವಾದಿಗಳ ಮೆಚ್ಚುಗೆಯನ್ನು ಗಳಿಸುವಂಥದಾಗಿದೆ.

ಮೇಲೆ ಚರ್ಚಿತವಾದ 'ಆದಿ ಅನಾದಿಯ ಸಮಸ್ಯೆ'ಯಲ್ಲಿಯೆ 'ಜಂಗಮ ಪ್ರಾಣತ್ವ'ದ ನೆಲೆಯೂ ಮುಸುಕು ತೆಗೆದು ಮುಂದೆ ನಿಲ್ಲುತ್ತದೆ. ಜಂಗಮ ಪ್ರಾಣತ್ವವೆಂದರೆ 'ಜಂಗಮವೆ ಭಕ್ತಕಾಯದಲ್ಲಿ ಜೀವಿಸುವ ಪ್ರಾಣ' ಎನ್ನುವುದು; ಹೀಗಾಗಿ ಈ 'ಜಂಗಮ ಪ್ರಾಣತ್ವ'ದೊಡನೆ 'ಭಕ್ತಕಾಯತ್ವ'ದ ವಿಷಯವೂ ಕಾಣಿಸಿಕೊಳ್ಳುತ್ತದೆ. ಪ್ರಭುದೇವರೊಡನೆ ಅನುಭಾವವನ್ನು ತೊಡತೊಡಗಿದ ಬಸವಣ್ಣನಿಗೆ ಈ ಅನುಭಾವ ಸ್ವಯಂವೇದ್ಯವಾಗುತ್ತದೆ. ಅಂದರೆ ತಂತಾನೆ ಹೊಳೆಯುತ್ತದೆ. ಇದನ್ನು ಪ್ರೊ. ಭೂಸನೂರಮಠರು ದೃಷ್ಟಾಂತವೊಂದರಿಂದ ಬಹುಸೊಗಸಾಗಿ ಸ್ಫುಟಗೊಳಿಸಿದ್ದಾರೆ:

"ಜ್ಞಾನ ಉದಯವಾಗುವದಕ್ಕೆ ಮೊದಲು ಭಾವಿಸಿದರೆ, ಪೂಜಿಸಿದರೆ, ಆಚರಿಸಿದರೆ, ಅನುಭವಿಸಿದರೆ ಅದಕ್ಕೆ ಅರ್ಥವೇನು? ಕಣ್ಣು ಇಲ್ಲದೆ ಕಾಲು

ನಡೆದು ಬಿಟ್ಟವನ್ನು ಮುಟ್ಟಬಹುದು. ಮುಟ್ಟಿದರೆ ಬಿಟ್ಟದ ಅರ್ಥ, ಬಿಟ್ಟ, ಕಾಲಿಗೆ ಹೇಗೆ ಕಂಡೀತು? ಜ್ಞಾನವಿಲ್ಲದ, ಸುಜ್ಞಾನವಿಲ್ಲದ ಅಂದರೆ 'ಜಂಗಮ' ವಿಲ್ಲದ ಆಚಾರಭಾವ, ಅನುಭಾವ, ಭಕ್ತಿಪ್ರಸಾದವೆಲ್ಲ ಅಥವಾ ಬಸವಣ್ಣನೆಲ್ಲ ತಲೆಯಿಲ್ಲದ ಮುಂಡ, ಕಳೆ ಇಲ್ಲದ ಕಪ್ಪು ಚಂದ್ರಮ, ಪ್ರಾಣವಿಲ್ಲದ ಕಾಯ". (ಪು. ೫೫೮)

ಬಸವಣ್ಣನವರ 'ಅನುಭಾವ'ದ ಈ ನಿಲವಿಗೆ ಪ್ರಭುದೇವರು "ತಮ್ಮ ನುಡಿಯ ದ ಸಮ್ಮತಿಯನ್ನು ನೀಡಿ"ದುದನ್ನು ಪರಾಮರ್ಶಕರು ಎತ್ತಿ ತೋರಿದ್ದಾರೆ. (ಪು. 557)

ಬಸವಣ್ಣನವರ ಸಂಪಾದನೆಯ ಈವರೆಗಿನ ಜಿಜ್ಞಾಸೆಯಲ್ಲಿ ಆನುಷಂಗಿಕವಾಗಿ ತಲೆದೋರಿದ 'ಕಾಯ ಭಕ್ತ; ಪ್ರಾಣ ಜಂಗಮವೆಂಬ' ಅನುಭಾವದ ಹೊಳಬೆಳಕಿನ ಒಳತಿರುಳನ್ನು, ಮೂಲ ಸೆಲೆಯನ್ನು ಪರಾಮರ್ಶಕರು ಹೀಗೆ ಬಯಲಿಗೆಳೆದಿದ್ದಾರೆ: "ಬಸವಣ್ಣನ ಈ ಅನುಭವ ಸರಣಿಯಲ್ಲಿ ಜ್ಞಾನದಿಂದ ಜೀವಂತವಾಗಿ ಪ್ರಾಣಿಸುತ್ತಿರುವ ವೀರಶೈವರ 'ಸುಜ್ಞಾನ ಸದ್ಭಕ್ತಿ'ಯ ನಿಜವಾದ ಕಲ್ಪನೆ ಮೆಲ್ಲ ಮೆಲ್ಲಗೆ ಪ್ರಸ್ಫುಟವಾಗುತ್ತ ನಡೆದುದನ್ನು ಕಂಡುಕೊಂಡು, ಭಕ್ತಿಯ ಪ್ರಾಣ ಜ್ಞಾನವಾದರೆ, ಭಕ್ತನ ಪ್ರಾಣ ಸುಜ್ಞಾನಮೂರ್ತಿ ಜಂಗಮವಾಗಿದ್ದಾನೆಂಬ ವೀರಶೈವಕ ಭಕ್ತಿಜ್ಞಾನದ ಕಲ್ಪನೆಯನ್ನೂ ಜ್ಞಾನವಿದ್ದರೆ ಭಕ್ತಿಯೆಂಬ ಶಿವಾನುಭವದ ನಿಲುಮೆಯನ್ನೂ ಸ್ಫುಟವಾಗಿ ವಿವರಿಸಿದ್ದಾರೆ. (ಪು. 556-58)

ಬಸವಣ್ಣನವರ ಈ 'ಜಂಗಮ ಭಕ್ತಿ'ಯ ನೆಲೆ-ನಿಲವುಗಳನ್ನು ಪ್ರಭುದೇವರಿಗೆ ಮನಗಾಣಿಸಬೇಕೆಂದು ಚೆನ್ನಬಸವಣ್ಣ ಹಾಡಿದ ಎಂಟು ಮೂಲ ವಚನಗಳಲ್ಲಿ ಎರಡನ್ನು ಮಾತ್ರ ಎತ್ತಿಕೊಂಡು ಪರಾಮರ್ಶಕರು ಅವನ್ನು ಹೀಗೆ ತಿಳಿಗೊಳಿಸಿದ್ದಾರೆ:

"ಭಕ್ತಿಯ ಆಚರಣೆಯಲ್ಲಿ ಮೂರು ಅಂಗ: ೧) ದಾಸ, ೨) ಈಶ, ೩) ಭಕ್ತಿ. ನಾನು ದಾಸ; ನೀನು ಈಶ, ನಾನು ನಿನಗೆ ಭಕ್ತಿಯನ್ನು ಮಾಡುತ್ತೇನೆ. ಈ ಮೂರರಲ್ಲಿ ಒಂದಂಗ ಇಲ್ಲದಿದ್ದರೆ ಭಕ್ತಿಯಾಚರಣೆ ನಡೆವುದಿಲ್ಲ. ನಾನು ಭಕ್ತ, ನೀನು ನೆಲದ ಮೇಲೆ ನಡೆದಾಡುವ ಪ್ರತ್ಯಕ್ಷ ಲಿಂಗ, ಜಂಗಮ. ನಿನಗೆ ನಾನು ಉಣಿಸಿ ಉಡಿಸಿ ದಾಸೋಹ ಮಾಡುತ್ತೇನೆಯೆಂದೆನ್ನುವಲ್ಲಿಯೂ ಭಕ್ತ, ಜಂಗಮ, ಭಕ್ತಿ ಬೇಕು. ಜ್ಞಾತೃ-ಜ್ಞೇಯ ಜ್ಞಾನ-ಅದು ಜ್ಞಾನತ್ರಿಪುಟಿಯಾದರೆ ಇದು ಭಕ್ತಿಯ ತ್ರಿಪುಟಿ. ಈ ತ್ರಿಪುಟಿ ಇಲ್ಲದೆ ಭಕ್ತಿ ನಡೆವುದೆ ಇಲ್ಲ (ಪು. ೬೦೭)

ಮುಂದುವರಿದು ಈ 'ಜಂಗಮ ಭಕ್ತಿ'ಯ ವಿಶೇಷಕಾಂತಿಯನ್ನು ಅತ್ಯಂತ ಮಾರ್ಮಿಕವಾಗಿ ಇಂತು ಬೆಳಗಿದ್ದಾರೆ:

"ಹೀಗೆ ಭಕ್ತಿ ನಡೆದರೆ ದ್ವೈತ ಭಕ್ತಿ, ದ್ವೈತ ಜ್ಞಾನದಂತೆ. ಜ್ಞಾನದಲ್ಲಿ ಅದ್ವೈತವನ್ನು ಸಾಧಿಸಿರುವಂತೆ ಭಕ್ತಿಯು ಮಾರ್ಗದಲ್ಲಿಯೂ ಅದ್ವೈತ ಮಾರ್ಗವನ್ನು ಸಾಧಿಸಿದವರಿದ್ದಾರೆ. ಇಲ್ಲಿ ವೀರಶೈವ ಶರಣರ ವಿಶೇಷವೆಂದರೆ— ಅದ್ವೈತ ಜ್ಞಾನ ಮತ್ತು ಅದ್ವೈತ ಭಕ್ತಿ ಸಮರಸವಾಗಿ ಜ್ಞಾನಮಾರ್ಗ ಭಕ್ತಿಮಾರ್ಗ ಕೂಡಿ ಒಂದಾಗಿ ಶಿವಾದ್ವೈತ ಭಕ್ತಿಯೆನಿಸಿ ಮುಂದುವರಿದು, ಮಾನವಹೃದಯದ ಅಂತರಾಳಕ್ಕೆ ಮುಟ್ಟಿ ವಿಶ್ವಾಂತರಂಗದ ಗೊಹೇಶ್ವರ ಲಿಂಗಕ್ಕೆ ಮುಟ್ಟಿ, ಆ ಅಖಂಡ ಪರಿಪೂರ್ಣ ಗಂಭೀರದಲ್ಲಿ ವಿಶ್ರಾಂತಿಯನ್ನೈದಿ, ಆ ನಿಜ ಗಂಭೀರದಿಂದ ಅದೇ ಭಕ್ತಿ ವಿಶ್ವತೋಮುಖವಾಗಿ, ವಿಶ್ವತೋಮಾರ್ಗವಾಗಿ ಹರಿದರೆ ಅದೇ ಜಂಗಮ ಭಕ್ತಿ. ಈ ಭಕ್ತಿಯ ಪ್ರಾಣ ಜಂಗಮ, ಸುಜ್ಞಾನ ಶಿವಾದ್ವೈತಜ್ಞಾನ, ಅರಿವುಲಿಂಗ. ಈ ಪ್ರಾಣದ ದೇಹ, ವಾಹನ, ದಾಸ, ತೊತ್ತು, ಪಡಿದೊತ್ತು, ಶಿವಾದ್ವೈತ ಜ್ಞಾನಭಕ್ತ. ಶಿವಾದ್ವೈತ ಜ್ಞಾನದಲ್ಲಿ ನಾನು ನೀನು ಎಂಬ ಭಿನ್ನವಾದ ಅರಿವಿಲ್ಲ. ಶಿವಾದ್ವೈತ ಜ್ಞಾನಭಕ್ತಿಯಲ್ಲಿ ಮಾಡುವ ನಾನು ಮಾಡಿಸಿಕೊಳ್ಳುವ ನೀನು ಎಂಬ ಭಿನ್ನ ಭಕ್ತಿಯಿಲ್ಲ". (ಪು. ೫೭೮).

೩

ಅನಂತರ ಇಲ್ಲಿಯ ಜಿಜ್ಞಾಸೆಗೆ ಇನ್ನೊಂದು ಕವಲೊಡೆಯುತ್ತದೆ; ಚೆನ್ನಬಸವಣ್ಣನವರು ಮತ್ತು ಪ್ರಭುದೇವರಲ್ಲಿ ಅನುಭಾವದ ಮಂಥನ ಮುಂದುವರಿಯುತ್ತದೆ. ಈ ಚರ್ಚೆಗೆ ಹಿನ್ನೆಲೆಯಾಗಿ, ಇದರಲ್ಲಿ ಪಾಲುಗೊಳ್ಳುವ ಮಹಾಮಹಿಮರ ಸಂಬಂಧವಿಶೇಷದ ಮೇಲೆ ಬೆಳಕು ಚೆಲ್ಲಿ, ಸಹೃದಯರು ಯಾವ ಕಣ್ಣೆಲೆಯಿಂದ (Perspective) ಈ ಜಿಜ್ಞಾಸೆಯನ್ನು ಸಮೀಕ್ಷಿಸಬೇಕೆಂಬುದನ್ನು ಪರಾಮರ್ಶಕರು ಸೂಚಿಸಿದ್ದಾರೆ:

"ಅನಿಮಿಷಯ್ಯನಿಗೆ ಬಸವಣ್ಣ ಲಿಂಗ ಕೊಟ್ಟ; ಅನಿಮಿಷಯ್ಯನ ಲಿಂಗ ಅಲ್ಲಮಪ್ರಭುವಿನ ಕೈಸೇರಿತು. ಅದೇ ಬಸವಣ್ಣ ಚೆನ್ನಬಸವಣ್ಣನ 'ಭಕ್ತಿದಳದುಳ'ಕ್ಕೆ ಒಳಗಾಗಿ ಆತನ ಲಿಂಗವನ್ನು ಕೈಮುಟ್ಟಿ ಅನುಗ್ರಹಿಸಿ ಕೊಟ್ಟ. ಅಂತು ಪ್ರಭುವಿನ ಗುರುವಿನ ಗುರು ಬಸವಣ್ಣ. ಚೆನ್ನಬಸವಣ್ಣನ ಗುರು ಬಸವಣ್ಣ. ಚೆನ್ನಬಸವಣ್ಣನಿಗಿಂತ ಮೊದಲೇ ಅಲ್ಲಮಪ್ರಭು ಗುರುವಿನಿಂದ ಲಿಂಗವನ್ನು ಹಡೆದು ಗುರುಪುತ್ರನಾಗಿರುವುದರಿಂದ ಪ್ರಭು ಅಣ್ಣನಾದ, ಹಿಂದುಗಡೆ ಬಸವಣ್ಣನ

ಗುರುಪುತ್ರನಾಗಿ ತಾನು ಹುಟ್ಟಿದ ಕಾರಣ ಚೆನ್ನಬಸವಣ್ಣ ತಮ್ಮನಾದ. ಅಂತೂ ಗುರುಸಂಪ್ರದಾಯ ಒಂದು, ಗರುಡಿ ಒಂದು, ಅಭ್ಯಾಸ ಅದೇ" (ಪು. ೫೮೩).

ಈ ಕಥನದಲ್ಲಿಯ ಕೊನೆಯ ಮಾತು ಮುಂದೆ ಕೆದರಲಿರುವ ಕಿಡಿಯನ್ನು, ಜರುಗಲಿರುವ ಚಕಮಕಿಯನ್ನು ಸೂಚ್ಯವಾಗಿ ನಿರ್ದೇಶಿಸಿ, ಚರ್ಚೆಗೆ ಸರಿಯಾದ ಪೀಠಿಕೆಯನ್ನೇ ಹಾಕಿದೆ.

ಮಾತಿಗೆ ಮಾತು ಬಂದಾಗ ಪ್ರಭುದೇವರೆನ್ನುತ್ತಾರೆ:

"ತಾನು ತಾನಾಗಬೇಕಾದರೆ, ತನ್ನಿಂದ ತಾನು ಆಗಬೇಕು. ಗುರುವಿರಲಿ, ಲಿಂಗವಿರಲಿ, ಇವರ ಹಂಗಿನಲ್ಲಿ ಅರಿದು ಇವರ ಹಂಗಿನಲ್ಲಿ ತಾನು ತಾನಾದರೆ, ಕಡೆಗೂ ಹಂಗಿಗನಾಗಿಯೆ ತಾನು ಉಳಿಯಬೇಕಾಗುತ್ತದೆ". (೫೮೪)

ಚೆನ್ನಬಸವಣ್ಣ, ಯೌವನಕ್ಕೆ ಸಹಜವಾದ ಉದ್ರೇಕದಿಂದ ಸಿಡಿದೆದ್ದು ಗುಡುಗುತ್ತಾನೆ:

"ಗುರುಲಿಂಗದ ಹಂಗಿನಲ್ಲಿ ಹುಟ್ಟಿ ಹಂಗಿನಲ್ಲಿ ಬೆಳೆದೆ.......ಅಷ್ಟೇ ಅಲ್ಲ; ಗುರುಘಾತಕ, ಲಿಂಗದ್ರೋಹಿ ನೀನು. ಗುರುವನ್ನು ಕೊಂದೆ. ಆತನ ಕರಸ್ಥಲದ ಲಿಂಗವನ್ನು ತೆಗೆದುಕೊಂಡೆ. ಗುರುಕೃಪೆಯಿಂದ ಲಿಂಗವನ್ನು ಅನುಗ್ರಹಿಸಿಕೊಳ್ಳದೆ ನೀನೇ ಧೃಷ್ಟತನದಿಂದ ಲಿಂಗವನ್ನು ಅನುಗ್ರಹಿಸಿಕೊಂಡೆ. ಅಲ್ಲಮ ವ್ರತಗೇಡಿ ನಿಯಮಗೇಡಿ ಎಂಬ ಪೂರ್ವ ಸಂಗತಿ ಜಗತ್ತಿಗೆ ಡಂಗುರ." (ಪು.೫೮೪-೮೫)

ಎಂಥವರೂ ತಾಳ್ಮೆಗೆಡಬಹುದಾದಂಥ ಸ್ಫೋಟಕ ಸನ್ನಿವೇಶ. ಆದರೆ ಪ್ರಭುದೇವರು 'ಪ್ರಭು-ದೇವ'ರಾಗಿ ತಮ್ಮ ಘನತೆ ಗಂಭೀರತೆಗೆ ತಕ್ಕ ಹಾಗೆ ನಡೆದುಕೊಳ್ಳುತ್ತಾರೆ. ಪರಾಮರ್ಶಕರ ಸೊಗಸಾದ ಮಾತಿನಲ್ಲಿ ಹೇಳಬೇಕೆಂದರೆ— "ಶಿವಶಾಂತವಾಗಿ ತಂಬೆಳಗಾಗಿ ಗಭೀರೋನ್ನತವಾಗಿ ಹಿಮಾಲಯದಂತೆ ಮುಗಿಲೆತ್ತರ ಎದ್ದುನಿಂತು" ಕೊಂಡೇ ಮರುಮಾತನಾಡುತ್ತಾರೆ:

"........ಇದ್ದಾನೆ ನೋಡಾ, ಎನ್ನ ಗುರುವು ಅನುಮಿಷನೆನ್ನ ಕರಸ್ಥಲದಲ್ಲಿ
ಇದ್ದಾನೆ ನೋಡಾ, ಎನ್ನಗುರು ಅನುಮಿಷನೆನ್ನ ಜ್ಞಾನದೊಳಗೆ
ಇದ್ದಾನೆ ನೋಡಾ, ಎನ್ನಗುರು ಬಸವಣ್ಣನೆನ್ನ ಕಂಗಳ ಮುಂದೆ!........"

ಹಾಗೆ ಸುಲಭವಾಗಿ ಯಾವುದನ್ನಾದರೂ ಒಪ್ಪಿಕೊಳ್ಳುವ ಸ್ವಭಾವ ಚೆನ್ನಬಸವಣ್ಣನ ದಲ್ಲ. ಅಂತೆಯೆ ಅವನು ಮತ್ತೆ ತನ್ನ ತರ್ಕದ ಕತ್ತಿಯನ್ನು ಝಳಪಿಸುತ್ತಾನೆ:

"........ನೋಡುವ ನೀನು, ನೋಡಿಕೊಳ್ಳುವ ಲಿಂಗ ಎರಡು ಆದುವು. ಎರಡು ಇದ್ದಾವೆ. ಕರಸ್ಥಲದಲ್ಲಿ ಒಂದು, ಪ್ರಾಣ ಸ್ಥಲದಲ್ಲಿ ಒಂದು-ಎರಡು ಲಿಂಗ ಆದುವು. ಅಥವಾ ಬಸವಲಿಂಗವನ್ನು ಕೂಡಿಸಿದರೆ ಮೂರು ಲಿಂಗ ಆದುವು. ಇಲ್ಲಿಯೂ ಇದ್ದಾನೆ ಅಲ್ಲ, ಇದ್ದಾವೆ.... "ಇನ್ನೂ ನಿನ್ನಲ್ಲಿ ಎರಡುಂಟಲ್ಲಾ!" (ಪು. ೫೮೬)

ಆ ಸಂದರ್ಭದಲ್ಲಿ ಪ್ರಭುದೇವರು ಚೆನ್ನಬಸವಣ್ಣನಿಗೆ 'ಪ್ರಾಣಲಿಂಗ ಸಮರಸ'ದ ರಹಸ್ಯಭೇದಿಸುತ್ತಾರೆ, ಅವನನ್ನು ಧನ್ಯನಾಗಿಸುತ್ತಾರೆ:

ಎರಡು ಮೂರು ಒಂದಕ್ಕೊಂದು ವೇದ್ಯವಾಗಿ, ಒಂದರಲ್ಲೊಂದು ಅರ್ಪಿತವಾಗಿ ಕೂಡಿ 'ಸಮಧಾತು' ಆದ ಬಳಿಕ ಎರಡು ಮೂರರ ಮಾತು ಎಲ್ಲಿ ಉಳಿಯಿತು? ಕರಸ್ಥಲದ ಇಷ್ಟಲಿಂಗ ಮನಸ್ಥಲದ ಲಿಂಗದಲ್ಲಿ—ಅರಗಿನ ಬಾಣ ಉರಿಯ ಪರ್ವತಕ್ಕೆ ಗುರಿ ಇಟ್ಟಂತೆ—ನೈವೇದ್ಯವಾಗಿ ಬೆರಸಿ 'ಸಮಧಾತು' ವಾಗಿದೆ. ಮನಸ್ಥಲದ ಲಿಂಗ ಭಾವಸ್ಥಲದ ಮಹಾಘನಲಿಂಗದಲ್ಲಿ ಅರ್ಪಿತವಾಗಿ ಬಿಚ್ಚಿ ತೆಗೆಯಬಾರದಂತೆ ಅಲ್ಲಿಯೆ ನಟ್ಟು ಮಹಾಲಿಂಗದಲ್ಲಿ ಕರಗಿ, ಅಲ್ಲಿಯೆ ಬೆರಸಿ 'ಸಮಧಾತು'ವಾಗಿದೆ. ಈ ಮಹಾಸ್ಥಲದ ಲಿಂಗ '...............ಎನ್ನ ಸರ್ವಾಂಗವೇದ್ಯವಾದ ಬಳಿಕ, ಇನ್ನು ಭಿನ್ನ ಭಾವಕ್ಕೆ ತೆರಹುಂಟೆ ಹೇಳಾ?' ಮಹಾಘನಲಿಂಗ ತನ್ನ ಅಖಂಡ ಪರಿಪೂರ್ಣ ಮಹಾಸ್ಥಲದಿಂದ ಪ್ರಾಣದಲ್ಲಿ ಅವತರಿಸಿದರೆ ತನ್ನ ಪ್ರಾಣ ತಪ್ಪಿಸಿಕೊಂಡು ಹೇಗೆ ಉಳಿಯಬಲ್ಲದು ಚೆನ್ನಬಸವಣ್ಣಾ? ಪ್ರಾಣವನ್ನೆಲ್ಲ ಭೇದಿಸಿ ಒಳಗೆ ಲಿಂಗ ಪ್ರವೇಶಮಾಡಿದರೆ, ಪ್ರಾಣ ಲಿಂಗದಲ್ಲಿ ನಟ್ಟು ಅಲ್ಲಿಯೇ ಕರಗಿ ಸಮರಸವಾಗಿ ಲಿಂಗ ಪ್ರಾಣ ಸಮಧಾತು ವಾದರೆ, ಈ ಸಮಧಾತುವಾದ ಲಿಂಗ ಪ್ರಾಣ ಸರ್ವಾಂಗದಲ್ಲಿ ವೇದ್ಯವಾದರೆ... ಸರ್ವಾಂಗ ಲಿಂಗಮಯವಾದರೆ, ಎರಡು ಇಲ್ಲ ಚೆನ್ನಬಸವಣ್ಣಾ. ಲಿಂಗಕ್ಕೆ ಮನೆ ಯಾದ ಶರಣನ ಅಂಗದಲ್ಲಿ ನಾನು ಇಲ್ಲ, ನನ್ನ ಪ್ರಾಣ ಉಳಿದಿಲ್ಲ. ಉಳಿದಿದೆ ಲಿಂಗಾಂಗ, ಉಳಿದಿದ್ದಾನೆ ಲಿಂಗಾಂಗಿ, ಸರ್ವಾಂಗದಲ್ಲಿ ಪ್ರಾಣಿಸುತ್ತಿದೆ ಪ್ರಾಣ ಲಿಂಗ" (ಪು. ೫೮೬)

ಹೀಗೆ ಈ ಎರಡನೆಯ 'ಸಂಪಾದನೆ'ಯಲ್ಲಿ ಪ್ರಾಣಲಿಂಗಸಾಮರಸ್ಯ'ದಂಥ ಗಹನವಾದ ವಿಷಯವನ್ನು ತಿಳಿಯಾಗುವಂತೆ ತನಿಯಾಗುವಂತೆ ವಿವರಿಸುವಲ್ಲಿ,

ಮೂಲದ ಸಂಭಾಷಣೆಯ ಶೈಲಿಯ ಮುಖಾಂತರ ಆ 'ಅನುಭಾವ ಗೋಷ್ಠಿ'ಯೆ ಪ್ರತ್ಯಕ್ಷ ಸಂಭವಿಸುವಂತೆ ನಿರೂಪಿಸುವಲ್ಲಿ ಪರಾಮರ್ಶಕರ ಪ್ರತಿಭೆ ಯಶಸ್ವಿಯಾಗಿದೆ.

೪

ಇಲ್ಲಿಯ ಜಿಜ್ಞಾಸೆ ಇನ್ನೊಂದು ದಿಸೆಯಲ್ಲಿ ಕುಡಿವರಿಯುತ್ತದೆ. ಪ್ರಭುದೇವರು ಮಡಿವಾಳ ಮಾಚಿದೇವರ ಅಂತರಂಗವನ್ನು ಒಳಹೊಕ್ಕು ನೋಡಲು ಯತ್ನಿಸುತ್ತಾರೆ. ಆಗ ಮಾಚಿದೇವ, ಮಾನವರೂಪದ ತಾನು ತನ್ನ ನಿಜ ಮೂಲಕ್ಕೆ ನಡೆದು, ಲಿಂಗಗಂಭೀರದಲ್ಲಿ ತಾನು ಹುಟ್ಟಿದುದನ್ನು ಕಂಡೆನೆನ್ನುತ್ತಾನೆ; ಈಗ ತನಗೆ ಒಡಲು, ಪ್ರಾಣ, ಅರಿವುಗಳಿದ್ದರೂ ಅವುಗಳಲ್ಲಿ ಅನುಕ್ರಮವಾಗಿ ಬಸವಣ್ಣನ ಭಕ್ತಿ, ಪ್ರಾಣಲಿಂಗ ಚೈತನ್ಯಮೂರ್ತಿ ಚೆನ್ನಬಸವಣ್ಣ, ವಿಶ್ವಭಾವದ ಪ್ರಭು ಪ್ರಭುಲಿಂಗ ತುಂಬಿರುವುದರಿಂದ ಅವುಗಳ ಹಂಗು ತನಗಿಲ್ಲವೆನ್ನುತ್ತಾನೆ. "ನಾನು–ನೀನು, ಶರಣ–ಲಿಂಗ, ಅರಿವು-ಕುರುಹು-ಎಂಬ ದ್ವೈತ ವಿಲಾಸದಾಚೆ ಅದ್ವೈತ ಸ್ವಯಂ-ಪರಂಜ್ಯೋತಿಯಲ್ಲಿ ಮುಳುಗಿ, ಅಲ್ಲಿಂದ ಮಾತು ಮೂಡಿ ಬರುತ್ತಿವೆ" ಎಂದು ನಿವೇದಿಸುತ್ತಾನೆ. (ಪು. ೫೯)

ಅಷ್ಟರಿಂದಲೆ ಪ್ರಭುದೇವರಿಗೆ ತೃಪ್ತಿಯಾಗುವುದಿಲ್ಲ. ಆತನ 'ಸ್ವಾನುಭಾವ'ವನ್ನು ಇನ್ನೂ ಪ್ರಕಾಶಪಡಿಸಬೇಕೆಂಬ ಅಭಿಲಾಷೆಯಿಂದ ಪುನಃ ಪ್ರಶ್ನೆಗಳ 'ಬಿರುಗಾಳಿ ಮಳೆ'ಯನ್ನೇ ಕರೆಯುತ್ತಾರೆ:

"ನಿನಗೆ ಈ ಲಿಂಗಗಂಭೀರವನ್ನು ತೋರಿದ ಗುರುವಾರು? ಈ ಗಂಭೀರವನ್ನು ದಾಟಿಸಿಕೊಂಡು ಮಹಾಗಂಭೀರಕ್ಕೆ ನಿನ್ನನ್ನು ಶಿಕ್ಷಿಸಿ ಕೊಂಡೊಯ್ದು ಜಂಗಮನಾರು? ತೋರಿದ ಗುರು, ಕಂಡ ಲಿಂಗ, ಶಿಕ್ಷಿಸಿ ತಿದ್ದಿದ ಜಂಗಮವು ಮೂರಲ್ಲ ಒಂದು ಎಂದು ನಿನ್ನ ಸ್ವಾನುಭಾವಕ್ಕೆ ತಂದುಕೊಟ್ಟವನಾರು? ಆದಿ ಅನಾದಿಯ ನಡುವಿರುವ ಒಡ್ಡನ್ನು ಕಿತ್ತು, ಅವನ್ನು ಏಕಾರ್ಥಗೊಳಿಸುವ ಭಾವವನ್ನು ನಿರ್ಭಾವವನ್ನು ನಿನಗೆ ತಿಳಿಸಿಕೊಟ್ಟವರಾರು? ನಿನ್ನ ನಿಜಸ್ಥಲದಲ್ಲಿ ನಿನ್ನನ್ನು ನಿಲಿಸಿದವರಾರು?" (ಪು. ೫೯)

ಅದಕ್ಕೆ 'ತಿಳಿ' ಮನದ ಮಾಚಿದೇವನೆನ್ನುತ್ತಾನೆ–ತನಗೆ ಗುರು ಲಿಂಗ ಜಂಗಮ ಸ್ವಾಯತ್ತವಾದುದು ಬಸವಣ್ಣನಿಂದ–ಎಂದು. ಆದರೆ ಪ್ರಭುದೇವರು ಮತ್ತೂ ಕೇಳುತ್ತಾರೆ, ಒರೆಗೆ ಹಚ್ಚುವ ಧ್ವನಿಯಲ್ಲಿ:

"ಗುರು ಲಿಂಗ ಜಂಗಮ ಸ್ವಾಯತ್ತವಾಗಿದ್ದರೆ ತಾನು ತನು ಇಲ್ಲದೆ ಇರಬೇಕು, ಮನ ಇಲ್ಲದಿರಬೇಕು. '........ಅರಿವರತು ಮರಹು ನಷ್ಟವಾಗಿರಬೇಕು? ಗುರು ಲಿಂಗ ಜಂಗಮದ ಸಾಹಿತ್ಯ, ಸಂಬಂಧ, ಸಂಗ ಸಾಧ್ಯವಾಗಬೇಕಿದ್ದರೆ, ಎಲ್ಲ ನಿರ್ಲೇಪವಾಗಿ ಪರಿಶುದ್ಧವಾಗಿರಬೇಕು ತಾನು........

"ತನು ಮನ ಭಾವದಲ್ಲಿ ಗುರು ಲಿಂಗ ಜಂಗಮ ಪ್ರತಿಷ್ಠೆಯಾದರೇನು? ಕಾಮ ಕ್ರೋಧ ಲೋಭ ಮುಂತಾದ ಪ್ರಕೃತಿಯ ಅವಲೋಹ ಅಂಗದಲ್ಲಿ ಅಂಟಿಕೊಂಡಿದ್ದರೆ ನಿರ್ಲೇಪ ಸಂಗ ಎಂತು ಸಾಧ್ಯ?" (ಪು. ೧೯೮–೯೯)

ಆಗ ಮಾಚಿದೇವ ತನ್ನ ಅಂತರಂಗವನ್ನೆ ಬಿಚ್ಚಿಡುತ್ತಾನೆ, ಪ್ರಭುದೇವರಿಗೆ, ಹೀಗೆ:

"ಅಂಗದ ಪ್ರಕೃತಿಯ ಗುಣಗಳೆಲ್ಲ ಆಚಾರಲಿಂಗ ಗುರುಲಿಂಗ ಮೊದಲಾದ ಲಿಂಗದೇವನಿಂದ ದೀಕ್ಷೆಯಾಗಿ ಸಂಸ್ಕಾರ ಹೊಂದಿ, ಲಿಂಗಗುಣಗಳಾಗಿದ್ದರೆ ಲಿಂಗಜೀವನದಲ್ಲಿ • ಬಂದ ಭಂಗವೇನು.......? ಸರ್ವಾಂಗದಲ್ಲಿ ಲಿಂಗದೇವ ಸಿಂಹಾಸನವೇರಿ ಮಂಡಿಸಿದ್ದರೆ ತನು ಮನ ಭಾವ ಶುದ್ಧ, ಅಷ್ಟವಿಧಾರ್ಚನೆ ಷೋಡಶೋಪಚಾರ ಶುದ್ಧ, ಕಾಮ ಕ್ರೋಧಾದಿಗಳು ಶುದ್ಧ, ಎಲ್ಲ ಶುದ್ಧ ಅವಗುಣ ಅವಲೋಹವಿಲ್ಲದೆ ಸರ್ವಶುದ್ಧ" (ಪು. ೧೯೯).

ಇದರಿಂದ ಪ್ರಭುದೇವರಿಗೆ ಸಂತೃಪ್ತಿಯುಂಟಾದರೂ, ಅವರು ಆತನನ್ನು ಇನ್ನೂ ಒರೆಗೆ ಹಚ್ಚುತ್ತಾರೆ. ಆಗ ಮಾಚಿದೇವನೆನ್ನುತ್ತಾನೆ:

"(ತನು ಮನ ಧನವ ನಿವೇದಿಸಿದಂಥ) ಬಸವಣ್ಣನ ನೆನೆವುದೆ ಲಿಂಗಾರ್ಚನೆ. ಬಸವಣ್ಣನ ನೆನೆವುದೆ ಪರತತ್ವ. ಬಸವಣ್ಣನ ನೆನೆವುದೆ ಕಲ್ಯಾಣವೆನಗೆ" ಎಂದು.

"ಬಸವಣ್ಣನನ್ನು ಸರ್ವಾಂಗಮುಖವಾಗಿ ಉಂಡ ಮಡಿವಾಳ ಸಾಮಾನ್ಯನಲ್ಲ. ಆತನೂ ಬಸವಣ್ಣನೇ. ಬೆಂಕಿಯನ್ನುಂಡ ಕಟ್ಟಿಗೆ ಏನು?........" ಎಂದು ತಮ್ಮೊಳಗೆ ತಾವೆ ಆಲೋಚಿಸಿ ಪ್ರಭುದೇವರು ಪ್ರಸನ್ನಚಿತ್ತರಾಗುತ್ತಾರೆ. (ಪು. ೨೦೧-೨೦೨) ಎದೆಯುಕ್ಕಿ ಮಾಚಿದೇವನನ್ನು ಹಾಡಿ ಹೊಗಳುತ್ತಾರೆ:

"ತನುವಿನ ಅನಲೋಹವ ಕೆಡಿಸಿ, ಮನದ ಸಂಚಲವ ನಿಲಿಸಿ,
ಸಕಲ ಕರಣಂಗಳನರಿವಿಂಗಾಹುತಿಯನಿಕ್ಕಿ;
ಸುಜ್ಞಾನಪ್ರಭೆಯನುಟ್ಟು, ಸುಜ್ಞಾನಪ್ರಭೆಯ ಹೊದೆದು,

ಸುಜ್ಞಾನಪ್ರಭೆಯ ಸುತ್ತಿ, ಸುಜ್ಞಾನಪ್ರಭೆಯ ಹಾಸಿ,
ಮಹಾಜ್ಞಾನದಲ್ಲಿ ನಿರ್ಭಾವದಲ್ಲಿ ನಿರ್ಭಾವಸಂಪನ್ನನಾದ ಮಡಿವಾಳನ
ಮಡಿಯ ಪ್ರಸಾದವ ನಾನು ಹೊದೆದ ಕಾರಣ,
ನಿರ್ಮಳನಾದೆನು; ನಿಜೈಕ್ಯನಾದೆನು; ನಿಶ್ಚಿಂತನಾದೆನು."

ಹೀಗೆ ಪ್ರಭುದೇವರು ಮಾಚಿದೇವನ ಸ್ವಾನುಭವದ ನಿಲವನ್ನು ಒರೆದು ನೋಡುತ್ತಾರೆ; ಆತನ ಸುಜ್ಞಾನದ ಇರವನ್ನು ತೆರೆದು ನೋಡುತ್ತಾರೆ. ಕೊನೆಗೆ ಕೊಂಡು ಕೂನೆದು, ಆತನಿಗೆ 'ಲಿಂಗೈಕ್ಯ' ವನ್ನು ಅನುಗ್ರಹಿಸುತ್ತಾರೆ.

ಈ ವಿಧವಾಗಿ 'ಶರಣರ ಗೋಷ್ಠಿ' ಯಲ್ಲಿ ಜಿಜ್ಞಾಸೆಗೊಳಗಾದ ಶಿವಾನುಭವದ ನೆಲೆ-ನಿಲುವುಗಳು ಹಡಿಮೂಡಿದುದನ್ನು ಪರಾಮರ್ಶಕರು ಇಲ್ಲಿ ಸಂವಾದ ರೂಪದಲ್ಲಿ ದಳದಳವಾಗಿ ಅರಳಿಸಿದ್ದಾರೆ, ನಿಚ್ಚಳಗೊಳಿಸಿದ್ದಾರೆ. ದಿವ್ಯಜೀವನದ ಮಹಾಬೆಳಗು, ಅರಿವು-ಆಚರಣೆ ಸ್ಫುಟವಾಗಿ ಮೂಡಿಸಿದ್ದಾರೆ. "ಗೋಷ್ಠಿಮಾಡುತ್ತಿರುವ ಬಸವಣ್ಣ ಮಡಿವಾಳ ಮಾಚಯ್ಯ, ಪ್ರಭುದೇವರುಗಳ ಸ್ವಾನುಭಾವದ ಆಳ, ಅವರ ಲಿಂಗಚಿತ್ತರ, ಅವರವರ ಸ್ವಯಂಭಾವದ ಹರಹು" ಇವೆಲ್ಲ ಸಹಜವಾಗಿ ಅರಳುವಂತೆ ನೋಡಿಕೊಂಡಿದ್ದಾರೆ. ಇವೆಲ್ಲವುಗಳ ಬೆಳಕು-ಬಣ್ಣಗಳ ಅನನ್ಯ ಕಾಂತಿಯನ್ನು ಆಯಾ ಸಂದರ್ಭದಲ್ಲಿ ರುಚಿರವಾಗಿ ಪ್ರಕಾಶಪಡಿಸಿದ್ದಾರೆ. 'ಶರಣದೇವ'ನೂ 'ದೇವಮಾನವ'ನೂ ಆದ ಬಸವಣ್ಣನ 'ದಾಸೋಹಂಭಾವ' ಮೂರ್ತಿ; ಚೆನ್ನಬಸವಣ್ಣನ 'ಸದ್ವಿನಯ ಪರಿಮಳಿಸುತ್ತಿರುವ' ಜ್ಞಾನಮೂರ್ತಿ; ಮಾಚಿದೇವನ ದಿವ್ಯ 'ಮಡಿವಾಳ' ಮೂರ್ತಿ; ಈ 'ಶರಣಗೋಷ್ಠಿ' ಒಕ್ಕಿದ ರತ್ನ-ರಾಶಿಯ ಮುಖ್ಯ ಮೇಟಿಯಾದ ಪ್ರಭುದೇವರ ಬಯಲು ಮೂರ್ತಿ—ಇವುಗಳನ್ನು ಉಜ್ವಲವಾಗಿ ರೂಪಿಸಿದ್ದಾರೆ. ಕಣ್ಣಿಗೆ ಕಟ್ಟುವಂತೆ ರೇಖಿಸಿದ್ದಾರೆ. ಶಿವಾನು-ಭವದ ಸಾರಸರ್ವಸ್ವದ ಸಾಕಾರಮೂರ್ತಿಗಳನ್ನಾಗಿ ಕಡೆದು ನಿಲ್ಲಿಸಿದ್ದಾರೆ.

೫

ಈ ಪರಾಮರ್ಶೆಯನ್ನು ಪರಿಶೀಲಿಸಿದಾಗ ಇದರ ಕೆಲವು ವಿಶಿಷ್ಟ ವರ್ಣ ರೇಖಾವಿನ್ಯಾಸ ಎದ್ದು ಕಾಣುತ್ತದೆ. ಆ ಬಗ್ಗೆ ಒಂದೆರಡು ಮಾತು.

ಯಾವ ಮತದಲ್ಲಿಯೂ ಇದ್ದಿರಬಹುದಾದ ರೀತಿಯಲ್ಲಿಯೇ ವೀರಶೈವರಲ್ಲಿಯೂ ಕೆಲವೊಂದು ಪೌರಾಣಿಕ ನಂಬಿಕೆ, ಆಖ್ಯಾಯಿಕೆಗಳಿವೆ. ಅಂಥವುಗಳನ್ನು ವೈಚಾರಿಕವಾಗಿ ಬರೆದು ಅರ್ಥೈಸುವ ಪರಾಮರ್ಶಕರ ಬಗೆ ಮನ-ಮೆಚ್ಚುವಂಥದಾಗಿದೆ.

ಬಸವಣ್ಣನವರ ನಂಬುಗೆಯಂತೆ, ವೀರಶೈವ ಪರಂಪರೆಯಂತೆ ಪರಮತ ವಾದಿಯಾದ ಬಿಜ್ಜಳ ಒಬ್ಬ 'ಗಣೇಶ್ವರ'; ಬಸವಣ್ಣನವರ ಭಕ್ತಿಯ ಬೆಳವಿಗೆಗಾಗಿಯೇ ಕೈಲಾಸದಿಂದ ಬಂದವ. ಇದು ಪುರಾಣದ ಮಾತೆಂಬುದು ಮೇಲೆಯೇ ತೋರುತ್ತದೆ. ಪ್ರೊ. ಸಂ. ಶಿ. ಭೂಸನೂರಮಠರವರೂ ಅದನ್ನು ಒಪ್ಪದಿರುವದಿಲ್ಲ. ಆದರೆ ಅದು ಪುರಾಣದ ಮಾತೆಂಬ ಕಾರಣಕ್ಕಾಗಿ ಅಲ್ಲ, ಅದರಲ್ಲಿ ಅಡಕವಾಗಿರುವ ಅರ್ಥವಿಶೇಷಕ್ಕಾಗಿ.

" ಬಿಜ್ಜಳ......ಬಸವಣ್ಣನ ಭಕ್ತಿಯ ಶಿವಕಾಂತಿಯನ್ನು ಒರೆದು ನೋಡುವಲ್ಲಿ ಒರೆಗಲ್ಲಾಗಿದ್ದ......ಭಕ್ತಿಯು ಮಾರ್ಗ ದಿವ್ಯಕ್ಕೆ ಕೊಂಡೊಯ್ಯಲಾರದು. ಎಂದು ಬಿಜ್ಜಳ, ಭಕ್ತಿಯೊಂದೇ ಮಾರ್ಗ ದಿವ್ಯಸಂಗಮಕ್ಕೆ ಎಂದು ಬಸವಣ್ಣನಲ್ಲಿ ತಿಕ್ಕಾಟ, ಘರ್ಷಣೆ ಆಗದಿದ್ದರೆ ಭಕ್ತಿಯ ಕ್ರಾಂತಿ ಪ್ರಕಾಶವಾಗುತ್ತಿದ್ದಿಲ್ಲ. ಈ ಭಕ್ತಿ ಪ್ರಕಾಶಕ್ಕೆ ಬಿಜ್ಜಳ ಕಾರಣನಾದ. ಅಂತೆಯೇ ಆತನೂ ಮರ್ತ್ಯ ಲೋಕಕ್ಕೆ ಅಮರ್ತ್ಯ ಭಕ್ತಿ ದಿವ್ಯಕಾಂತಿಯಿಂದ ಕಳೆಗೊಂಡು ಬೆಳೆವುದಕ್ಕೆ ಬಸವಣ್ಣನಿಗೆ ಸಹಕಾರಿಯಾದ. ಈ ಅರ್ಥದಲ್ಲಿ ಬಿಜ್ಜಳ 'ಆದಿ ಗಣೇಶ್ವರ' ಎಂದು ನಾವು ಇಟ್ಟುಕೊಳ್ಳಬಹುದು " (ಪು. ೫೬೩)

ಪರಾಮರ್ಶಕರ ಈ ಅರ್ಥ ವಿವರಣೆ ಅರ್ಥಪೂರ್ಣವಾಗಿದೆ; 'ಪುರಾಣ' ಕಲ್ಪನೆಯ ಮೇಲೆ ಚೆಲ್ಲಿದ ಹೊಸ ಬೆಳಕಾಗಿದೆ.

ಇಂಥದೇ ಆದ ಇನ್ನೊಂದು ವೀರಶೈವ ನಂಬುಗೆಯ ವಿವೇಚನೆ :

" 'ಪುರಾಣ'ದ ಹದಿನೆಂಟು ಗಣೇಶ್ವರರು ಬಸವಣ್ಣನ 'ಅನಾದಿ ಗಣೇಶ್ವರ' ತ್ವದ ಪರಂಪರೆಯನ್ನು ಹೇಳುತ್ತಾರೆ....ಇದನ್ನು 'ಪುರಾಣ' ದ ಭಕ್ತರು ತಲೆ ಮುಚ್ಚಿ ತಲೆದೂಗಬಹುದು. ಆದರೆ ನಾವು 'ಪುರಾಣ'ದ ಮರೆಯಲ್ಲಿರುವ 'ಸ್ವ-ಅನುಭಾವ'ವನ್ನು ಪರಾಮರ್ಶಿಸಿ ನೋಡಬಹುದು. ಅರಿವಿನ ಮಾನವ ಪ್ರಾಣಿ, ಮಾನವ ದೇಹಿ ತನ್ನನ್ನು ಭೇದಿಸಿ, ಅನಂತ ಕಾಲವನ್ನು ದಾಟಿ ತನ್ನ ಮೂಲ ನಿಜವನ್ನು ಮುಟ್ಟಬಲ್ಲ; ಮುಟ್ಟಿ ಅಲ್ಲಿಂದ ಇಲ್ಲಿ ಇರಬಲ್ಲ ಎಂಬ ಮಾತು ಈ 'ಪುರಾಣ'ದ ರಹಸ್ಯ ಸತ್ಯವೆಂಬಂತೆ ತೋರುತ್ತದೆ. " (ಪು. ೫೭೪)

ಇಂತಹ ನಿರ್ವಿಕಾರಚಿತ್ತದ ನ್ಯಾಯನಿಷ್ಠುರ ವಿವೇಚನೆ, ಪುರಾಣ ಕಲ್ಪನೆ ಭಾವನೆಗಳ ಅರ್ಥಶೋಧನೆ ಪ್ರೊ. ಸಂ. ಶಿ. ಭೂಸನೂರಮಠ ಅವರಿಗೆ ಕೀರ್ತಿ ತರುವಂಥದಾಗಿದೆ. ವಿಚಾರವಾದಿಯ ವಿವೇಕದ ಬೆಳಕಿನಲ್ಲಿ ತೂಗಿ ನೋಡುವ ಈ ಪ್ರಯತ್ನ ಸ್ತುತ್ಯವಾಗಿದೆ.

೬

ಈ ಪರಾಮರ್ಶೆಯು ಇನ್ನೊಂದು ಗುಣವಿಶೇಷ ವಿಶ್ಲೇಷಣೆಗೆ ಸಂಬಂಧಿಸಿ-
ದುದು ಆಗಿದೆ. ಪ್ರೊ. ಸಂ. ಶಿ. ಭೂಸನೂರಮಠ ಅವರು ಶಿವಶರಣರ ಒಂದೊಂ
ದು ವಚನ, ವೀರಶೈವ ಪರಿಭಾಷೆಯ ಒಂದೊಂದು ಪದವನ್ನು 'ದಿವ್ಯಕ್ಷೇತ್ರ'
ವೆಂದೇ ಪರಿಭಾವಿಸಿದ್ದಾರೆ; ಭಕ್ತಿ-ಪೂರ್ವಕವಾಗಿ ಅದರ ಒಳಹೊಕ್ಕು, ಅಲ್ಲಿಯ
ದೇವತಾದರ್ಶನದಿಂದ ಧನ್ಯರಾಗಿ, ತೀರ್ಥ-ಪ್ರಸಾದಗಳನ್ನು ತಾವು ಸವಿದುದಲ್ಲದೆ
ಇತರರಿಗೂ ತಂದು ಉಣಬಡಿಸಿದ್ದಾರೆ. ಈ ಅಪೂರ್ವ ಗುಣಲಕ್ಷಣದಿಂದಾಗಿ ಈ
ಪರಾಮರ್ಶೆಗೆ 'ಪ್ರಾಸಾದಿಕ' ಕಾಂತಿಯುಂಟಾಗಿದೆ.

ಶಬ್ದಗಳ ಬೇರುಗಳನ್ನೇ ಹಿಡಿದು ಅಲುಗಾಡಿಸಿ, ಕಣ್ಣುಮರೆಯಾದ
ಅರ್ಥವಂತಿಕೆಯ ಮೂಲದ್ರವ್ಯವನ್ನು ತೋಡಿ ತೆಗೆದು, ಅದರ ಬೆಡಗನ್ನು ಹೊಳೆ
ಯಿಸುವುದು ಪ್ರೊ. ಸಂ. ಶಿ. ಭೂಸನೂರಮಠರ ಇನ್ನೊಂದು ವೈಶಿಷ್ಟ್ಯ. "ಇಲ್ಲಿ
ಹೌದು ಎಂಬ ಶಬ್ದದ ಅಹುದು ಅಪ್ಪುದು ಆಗುವುದು ಎಂಬ ಮೂಲ ರೂಪ
ವನ್ನು ಗಮನದಲ್ಲಿಟ್ಟು ಕೊಂಡರೆ ಬಹಳ ನೆಟ್ಟಗೆ" ಎಂಬಲ್ಲಿ ಅದು ಕಾಣದೊರೆ
ಯುತ್ತದೆ (ಪು. ೨೪೪). "ಗುರುತು ಕೂನು ಇಲ್ಲ" (ಪು. ೫೪೯) ಎಂಬಂಥ
ಆಡುನುಡಿಯನ್ನು ಅವರು ಅಲ್ಲಲ್ಲಿ ಅಳವಡಿಸಿಕೊಂಡಿದ್ದಾರೆ. 'ಅನಾದಿ'ಗೆ ಬದ-
ಲಾಗಿ 'ಮೊದಲಿಲಿ' (ಪು. ೫೫೭), 'ಆದ್ಯ'ದ ಸ್ಥಾನದಲ್ಲಿ 'ಮೂಲಿಗ' (ಪು. ೫೬೦)
ಎಂಬಂಥ ಅಚ್ಚಕನ್ನಡಪದಗಳನ್ನು ಹೊಸತಾಗಿ ಟಂಕಿಸಿದ್ದಾರೆ. ಅಲ್ಲದೆ ಹಳೆಯ
ವಾದ ಪದಗಳನ್ನೆ ಹೊಸ ದಿಕ್ಕಿನಲ್ಲಿ ಹಿಗ್ಗಿಸಿ, ನಾಮಪದಗಳಿಂದ ಕ್ರಿಯೆಗಳನ್ನು
ಸಿದ್ಧಪಡಿಸಿ, ಕನ್ನಡದ ಸತ್ವ-ಸಿರಿವಂತಿಕೆಯನ್ನು ಹೆಚ್ಚಿಸುವ ದಿಸೆಯಲ್ಲಿ ಒಂದು
ದಿಟ್ಟ ಹೆಜ್ಜೆಯನ್ನಿಟ್ಟಿದ್ದಾರೆ. ಇದರ ಹೆಜ್ಜೆಗುರುತುಗಳಂತೆ 'ದೇಹಿಸು, ಪ್ರಾಣಿಸು'
(ಪು. ೫೮೦) ಎಂಬವುಗಳು ಇಲ್ಲಿ ಕಂಡುಬರುತ್ತವೆ.

ವರ್ಣಿಸಬೇಕಾದ ಸಂನಿವೇಶ-ಸಂದರ್ಭವನ್ನು ಕಣ್ಣೆದುರು ಕಟೆದು ನಿಲ್ಲಿ-
ಸುವಂಥ ಬಣ್ಣ-ಬೆಡಗಿನ ಪದ-ಪದಪುಂಜಗಳನ್ನು ಉಪಯೋಗಿಸುವುದರಲ್ಲಿಯೂ
ಪ್ರೊ. ಸಂ. ಶಿ. ಭೂಸನೂರಮಠ ಅವರದು ಎತ್ತಿದ ಕೈ. "......ಮೂರ್ತಿಯ
ಮಹಾತ್ಮೆಯನ್ನು ಶಬ್ದದಲ್ಲಿ ಶಾಸನವಾಗಿ ನಿಲ್ಲಿಸುತ್ತಾನೆ" (ಪು. ೫೬೮);
"....(ಆ) ಪ್ರಸಂಗ ಇಲ್ಲಿ ಮತ್ತೆ ಝಳಪಿಸಿದಂತಿದೆ" (ಪು. ೫೮೫);
"ಸಿದ್ಧರಾಮಯ್ಯನ ಮೊನಚು ಒರೆಗೆಳೆದು ನಿಂತಂತಿದೆ." (ಪು. ೫೮೫); "ಪ್ರಭು
ದೇವರು......ಶಿವಶಾಂತವಾಗಿ ತಂಬೆಳಗಾಗಿ ಗಭೀರೋನ್ನತವಾಗಿ ಹಿಮಾಲಯ
ದಂತೆ ಮುಗಿಲೆತ್ತರ ಎದ್ದು ನಿಂತು ಅನುಭಾವ ಸಮಸ್ಯೆಗಳನ್ನು ಪರಿಹರಿಸುತ್ತಾರೆ"

(ಪು ೫೮೫): “ಆನಂದ ಸುಳಿಗೊಂಡು ದಳವೇರುತ್ತದೆ” (ಪು. ೬೦೬); “ಚೆನ್ನ ಬಸವಣ್ಣನಲ್ಲಿ ಮುಳಿಸು ಮೊನೆದೋರಿದಂತಿದೆ” (ಪು. ೫೨೨) ಇಲ್ಲೆಲ್ಲ ಚಿತ್ರಕ ಶಕ್ತಿ, ಸಾಹಿತ್ಯಿಕ ಓಜ-ತೇಜ ಸ್ವಯಂ ಸ್ಪಷ್ಟವಾಗಿ ಅರಳಿದೆ.

೨

ಪ್ರೊ. ಸಂ. ಶಿ. ಭೂಸನೂರಮಠ ಅವರು ತತ್ವಜ್ಞಾನ-ಸಾಹಿತ್ಯದಲ್ಲಿ ಅಭಿಜಾತ ಆಸಕ್ತಿಯುಳ್ಳವರು. ವೀರಶೈವ ಅನುಭಾವ-ಸಾಹಿತ್ಯ ಸೃಷ್ಟಿಯ ಅಭ್ಯಾಸಕ್ಕಾಗಿ ತಮ್ಮ ಬದುಕನ್ನೆ ಗಂಧದ ಕೊರಡಾಗಿಸಿ ತೇದವರು, ತೇಯುತ್ತಿರುವವರು. ಪಾರದರ್ಶಕ ಪ್ರಾಮಾಣಿಕತೆಯೇ ಉಸಿರು-ನೆತ್ತರು ಆಗಿರುವವರು. ಪರಾಮರ್ಶಕನಲ್ಲಿ ಅವಶ್ಯವಾಗಿರಬೇಕಾದ ಐತಿಹಾಸಿಕಪ್ರಜ್ಞೆ, ನಿರ್ವಿಕಾರ ಚಿತ್ತ, ನ್ಯಾಯನಿಷ್ಠುರ ದೃಷ್ಟಿಯುಳ್ಳವರು. ಅವರ ಇಂಥ ಶೀಲ-ಸ್ವಭಾವದ ಕಂಪು ಪರಾಮರ್ಶೆಯ ತುಂಬ ಹರಡಿದೆ; ತನ್ನ ಒಟ್ಟಂದದ ಒಂದು ಪ್ರಭಾವಮುದ್ರೆಯನ್ನು ನಿಚ್ಚಳವಾಗಿ ಮೂಡಿಸಿದೆ. ಈ ಕಾರಣಕ್ಕಾಗಿಯೂ, ಒರೆಯ ಒಪ್ಪ ಹಾಗೂ ಬರೆಹದ ಓರಣಗಳಿಂದಾಗಿಯೂ ಈ ಪರಾಮರ್ಶೆಯ ಮೌಲಿಕತೆ ಹಿಂಗಿಲಾದುದಾಗಿದೆ.

# ಚುಟುಕು ಸಾಹಿತ್ಯದ ಹುಟ್ಟು-ಬೆಳವಣಿಗೆ

ಹೊಸಗನ್ನಡ ಸಾಹಿತ್ಯದಲ್ಲಿ 'ಚುಟುಕು' ಸಾಹಿತ್ಯ ಗಮನಾರ್ಹವಾದ ಒಂದು ಪ್ರಕಾರವಾಗಿ ಬೆಳೆದು ಬಂದಿದೆ. ಇತ್ತೀಚೆ ಪತ್ರಿಕೆಗಳವರ ವಿಶೇಷ ಮುತುವರ್ಜಿಯ ಚಿತ್ರಮಯ ಪ್ರಕಟನೆಯಿಂದಾಗಿ ಅತ್ಯಂತ ಜನಪ್ರಿಯವಾಗಿದೆ. ಆದರೂ ನಮ್ಮ ಸಾಹಿತ್ಯ ವಿಮರ್ಶಕರು ಅದನ್ನು ಅಷ್ಟು ಲಕ್ಷಿಸಿದಂತಿಲ್ಲ. ಇಂಥ ಸಂದರ್ಭದಲ್ಲಿ ಇದರ ಹುಟ್ಟು-ಬೆಳವಣಿಗೆ, ಸಿದ್ಧಿ ಸಾಧ್ಯತೆಗಳನ್ನು ವಿವೇಚಿಸಲು ನಾನಿಲ್ಲಿ ಯತ್ನಿಸಿದ್ದೇನೆ.

ಆಧುನಿಕ ಕಾಲದಲ್ಲಿ 'ಚುಟುಕ'ದ ಕೃಷಿಯನ್ನು ಮೊತ್ತಮೊದಲು ಮಾಡಿದವರು ಶ್ರೀ ಜಿ. ಪಿ. ರಾಜರತ್ನಂ. ಅವರು ೧೯೪೦ ರಲ್ಲಿ ಪ್ರಕಟಿಸಿದ 'ನೂರು ಪುಟಾಣಿ' ಸಂಗ್ರಹವೇ ಮೊದಲ ಹಾಗು ಮಹತ್ವದ ಕೃತಿಯಾಗಿದೆ. ಇದಕ್ಕೆ ಬರೆದ 'ಬಿನ್ನಹ'ದಲ್ಲಿ ಅವರು ತಮ್ಮ 'ಪುಟಾಣಿ' ಪದ್ಯಗಳಿಗೆ ಪ್ರೇರಣೆಯನ್ನೊದಗಿಸಿದ ಮೂರು ಮುಖ್ಯ ಪರಂಪರೆಗಳನ್ನು ಪ್ರಸ್ತಾಪಿಸಿ, ಅವುಗಳ ಮಹತ್ವದ ಗುಣಲಕ್ಷಣಗಳನ್ನು ವಿವರಿಸಿದ್ದಾರೆ.

ಮೊದಲನೆಯದು ಸಂಸ್ಕೃತ ಪರಂಪರೆ; 'ಮುಕ್ತಕ' ಹಾಗು 'ಚಾಟು' ಪದ್ಯಗಳಿಗೆ ಸಂಬಂಧಿಸಿದ್ದು. ಶ್ರೀ ತೀ. ನಂ. ಶ್ರೀ. ಅವರು ೧೯೩೨ ರಲ್ಲಿ ಪ್ರಕಟಿಸಿದ 'ಒಲುಮೆ' ಸಂಸ್ಕೃತದ ಅನುವಾದಿತ 'ಮುಕ್ತಕ'ಗಳನ್ನೊಳಗೊಂಡಿದೆ. ಈ 'ಒಲುಮೆ'ಗೆ ಬರೆದ ಮುನ್ನುಡಿಯಲ್ಲಿ, 'ಮುಕ್ತಕ' ಸ್ವರೂಪದ ಕುರಿತು ತೀ. ನಂ. ಶ್ರೀ. ಬರೆದ ಮಾತುಗಳು ಗಮನಾರ್ಹವಾಗಿವೆ.

"ಈ ಬಿಡಿ ಪದ್ಯ........ ಮುಕ್ತಕ ....... ಒಂದೊಂದೂ ಪೂರ್ಣಕಾವ್ಯ. ಅವಕಾಶವು....... ಕಿರಿದಿದ್ದರೂ ಅದು ಒಂದು ಸಮಗ್ರ ಭಾವವನ್ನು ಚಿತ್ರಿಸುತ್ತದೆ. ಅದರ ಸವಿಯನ್ನೆಲ್ಲಾ ಆಸ್ವಾದಿಸಬೇಕಾದರೆ, ಕವಿಯ ಕಲ್ಪನೆಯೊಂದಿಗೆ ನಮ್ಮ ಕಲ್ಪನೆಯನ್ನೂ ಹಾರಬಿಟ್ಟು, ಚಿತ್ರದ ಸುತ್ತಲೂ ಒಂದು ಉಚಿತವಾದ ಆವರಣವನ್ನು ಕಲ್ಪಿಸಿಕೊಂಡು, ಅದರ ಪ್ರಭೆಯನ್ನು ಕವಿಯ ಮಾತುಗಳ ಮೇಲೆ

ಬೀರಬೇಕು. ಆಗ ನಮಗೆ ಈ 'ದಂತದ ಮೇಲಿನ ಚಿತ್ರಗೆಲಸ'ದ ಅಪೂರ್ವ ಸತ್ವವು ಮುಂದಟ್ಟಾಗುತ್ತದೆ; ಅಮರುಕನಂಥ ಕವಿಗೆ ಸಂಸ್ಕೃತ ಸಾಹಿತ್ಯದಲ್ಲಿರುವ ಪ್ರಶಸ್ತಿ [ 'ಅಮರುಕ ಕವೇರೇಕ: ಶ್ಲೋಕ: ಪ್ರಬಂಧ ಶತಾಯತೇ] ಅರ್ಥವಾಗುತ್ತದೆ."

ಇದೇ ಜಾತಿಗೆ ಸೇರುವ 'ಚಾಟು' ಪದ್ಯ ಪ್ರಕಾರವೂ ಸಂಸ್ಕೃತದಲ್ಲಿದೆ. ಈ ಬಗ್ಗೆ ಶ್ರೀ ಜಿ. ಪಿ. ರಾಜರತ್ನಂ ಹೀಗೆ ಬರೆಯುತ್ತಾರೆ:

"ಒಂದೇ ಪದ್ಯದಲ್ಲಾಗಲಿ, ಹಲವು ಪದ್ಯಗಳಲ್ಲಾಗಲಿ-ಸರ್ಗ ಆಶ್ವಾಸ ಬಂಧಗಳಿಲ್ಲದೆ—ಮುಗಿದರೆ ಅದನ್ನು ಸಾಮಾನ್ಯವಾಗಿ 'ಚಾಟು' ಎನ್ನುವರಂತೆ. ......ಚಾಟುವಿಗೆ ಇಂಥದೇ ಭಾವ, ಇಂಥದೇ ರಸ ಇರಬೇಕೆಂಬ ಕಟ್ಟಿಲ್ಲ. ಸ್ವರೂಪ ಸಣ್ಣದಾಗಿರಬೇಕು, ಹೇಳುವ ರೀತಿಯಲ್ಲಿ ಚಮತ್ಕಾರವಿರಬೇಕು, ಧ್ವನಿ ತುಂಬಿರಬೇಕು, ಇಷ್ಟೆ".

ಈ ಸಂಸ್ಕೃತ 'ಮುಕ್ತಕ'. 'ಚಾಟು' ಜಾತಿಯ ಬಿಡಿ ಪದ್ಯಗಳಲ್ಲಿ ಕೆಲವನ್ನು ಆಯ್ದು ಅನುವಾದಿಸಿ 'ಪುಟಾಣಿ'ಯ ರೂಪದಲ್ಲಿ ಕನ್ನಡಿಗರಿಗೆ ಶ್ರೀ ಜಿ. ಪಿ. ರಾಜರತ್ನಂ ಅವರು ನೀಡಿದ್ದಾರೆ:

"ಕಮಲೆ ಮಲಗುವಳು ಕಮಲದಲಿ;
ಹರ ಮಲಗುವನು ಹಿಮಾಲಯದಲ್ಲಿ;
ಹರಿ ಮಲಗುವನು ಹಾಲ್ಗಡಲಲ್ಲಿ;
ಏಕೆನೆ—ತಗಣೆಯ ಶಂಕೆಯಲಿ!"

ದೇವ ದೇವತೆಯರು ವಿಶಿಷ್ಟ ಸ್ಥಾನದಲ್ಲಿಯೇ ಏಕೆ ನೆಲೆನಿಂತಿದ್ದಾರೆಂಬುದಕ್ಕೆ ಕವಿ ಕೊಡುವ ಕಾರಣ ಕಲ್ಪನಾ ವೈಚಿತ್ರ್ಯ, ವಿನೋದವನ್ನೊಳಗೊಂಡು ಪದ್ಯದ ಕೊನೆಯಲ್ಲಿ ಅನಿರೀಕ್ಷಿತವಾಗಿ ಬರುವದರಿಂದ ನಮ್ಮ ಮೇಲಾಗುವ ಅದರ ಪರಿಣಾಮ ಹೃದ್ಯವೂ ಅನನ್ಯಸಾಧಾರಣವೂ ಆಗಿದೆ.

"ಹಸಿವಿಗುಣಬಯಸಿತ್ತು ಗಣಪನಿಲಿಯನು ಹಾವು,
ಅದ ಕುಮಾರನ ನವಿಲು,
ಪಾರ್ವತಿಯ ಸಿಂಹವೋ ಗಜಮುಖನನೆ.
ಗೌರಿ-ಗಂಗೆಯು ಚಂದ್ರನುರಿಗಣ್ಣ ಸಹಿಸರೀ
ಸಂಸಾರ ಸಾಕಾಗಿ
ಹಾಲಾಹಲವನೀಶನುಂ ಪೀರ್ದನೆಂದು"

ಮನೆಯ ಜನರ 'ಒಳಜಗಳ' ಕಂಡು ಕಂಡು ಬೇಸತ್ತೇ ಶಿವ ಹಾಲಾಹಲ ವಿಷವನ್ನು ಕುಡಿದಿರಬೇಕೆಂಬ ಕವಿಕಲ್ಪನೆ, ಕಲ್ಪನಾವೈಚಿತ್ರ್ಯ, ತಿಳಿಹಾಸ್ಯವನ್ನೊಳಗೊಂಡು ಹೃದ್ಯವಾಗಿದೆ!

ಎರಡನೆಯದಾದ ಪಾಶ್ಚಾತ್ಯ ಪರಂಪರೆಯನ್ನು ಪರಿಚಯಿಸುತ್ತ ಶ್ರೀ ಜಿ. ಪಿ. ರಾಜರತ್ನಂ ಅವರು,

"ಈ ಜಾತಿಯ ಸಾಹಿತ್ಯ ಸಂಸ್ಕೃತ ಒಂದಕ್ಕೆ ಮೀಸಲಲ್ಲ. ಗ್ರೀಕ್, ಲ್ಯಾಟಿನ್, ಇಂಗ್ಲೀಷ್, ಜರ್ಮನ್, ಫ್ರೆಂಚ್ ಮುಂತಾದ ಅನ್ಯಭಾಷೆಗಳಲ್ಲೂ ಸಿಕ್ಕುತ್ತವೆ." ಎಂದೂ ಅದನ್ನವರು ಎಪಿಗ್ರಂ (Epigram) ಅನ್ನುವರೆಂದೂ ತಿಳಿಸಿದ್ದಾರೆ. ಮಾತ್ರವಲ್ಲ, ಅಂಥ ಕೆಲವನ್ನು—'ಗ್ರೀಕ ಕಾವ್ಯ ಸಂಚಯ' ದಿಂದ ಪ್ರೇರಿತವಾದವುಗಳನ್ನು—ಕನ್ನಡಿಗರಿಗೆ ನೀಡಿದ್ದಾರೆ:

"ನಾಯಿ ಮುಖಮೋಲೆತ್ತಿ
ನೀಳ್ದೊದರಲಲ್ಲಾರೊ ಸತ್ತರಂತೆ!
ಮರುಮನೆಯ ಹಾರ್ಮೋನಿಯಮ್
ಆಯೆನ್ನಲಾ ನಾಯೆ ಸತ್ತಿತಂತೆ!!

* * * * *

"ಗುರು ಮಹಾ ವಾಗ್ಮಿ:
ನಿಂತು ಮಾತಾಡಿದರೆ ಗಂಟೆ, ಕಂಚು!
ಶಿಷ್ಯರೋ— ಏಳೆ:
ಗೋಡೆ ನಾಲ್ಕರ ಜೊತೆಗೆ ಮೂರು ಬೆಂಚು!"

ಈ 'ಕಿರುಚಿತ್ರ' ಗಳಲ್ಲಿಯ ವಿಡಂಬನೆಯ ಮೊನೆ ತೀಕ್ಷ್ಣವೂ ಧ್ವನಿಪೂರ್ಣವೂ ಆಗಿದೆ!

ಮೂರನೆಯದಾದ ಕನ್ನಡ ಪರಂಪರೆಯ ಬಗ್ಗೆ ಒಂದಿಷ್ಟು ವಿವರವಾಗಿ ವಿವೇಚಿಸಿದ್ದಾರೆ. ಸಮಯ ಸಂದರ್ಭದ ಸ್ಫೂರ್ತಿಯಿಂದ ಸೃಷ್ಟಿಗೊಂಡ ಶರಣರ ವಚನ, ದಾಸರ ಪದ್ಯ, ಸರ್ವಜ್ಞನ ತ್ರಿಪದಿ, ಜನಪದ ಸಾಹಿತ್ಯದ ಜಿಡಿ ಪದ ಮೊದಲಾದ ಇಂಥ 'ಬಿಡಿಪದ'ಗಳೆಲ್ಲವೂ ಇದೇ ಜಾತಿಗೆ ಸೇರಿದವುಗಳೆಂಬುದನ್ನು

ವಿವರಿಸಿದ್ದಾರೆ. ಆದರೆ "ಅದಕ್ಕೆ ನಮ್ಮವರು ಒಂದು ವಿಶಿಷ್ಟವಾದ ಹೆಸರು ಕೊಡಲಿಲ್ಲ" ಎಂಬುದನ್ನು ಎತ್ತಿತೋರಿಸಿ "ಈಗಲಾದರೂ ಅದಕ್ಕೊಂದು ಹೆಸರು ಇಟ್ಟು ಕರೆದಿಲ್ಲ" ವೆಂದು ಹೇಳಿದ್ದಾರೆ. ಕೊನೆಯಲ್ಲಿ "ಇದರ (ಈ ಸಾಹಿತ್ಯ ಪ್ರಕಾರದ) ಚಿಕ್ಕ ಮೂರ್ತಿಗಾಗಿ ನಾನು ಇದನ್ನು 'ಪುಟಾಣಿ' ಎಂದು ಕರೆದಿದ್ದೇನೆ" ಎಂದಿದ್ದಾರೆ.

ತಮ್ಮ ಈ ಪ್ರಸ್ತಾವನೆಗೆ ಅನುಗುಣವಾಗಿ ಪ್ರಾಚೀನ ಕನ್ನಡ ಸಾಹಿತ್ಯದಿಂದಾಯ್ದ ಕೆಲವು, ತಮ್ಮ ಇತರ ಕೃತಿಗಳಿಂದ ಆಯ್ದಂಥವು ಕೆಲವು ಹಾಗೂ ಸ್ವತಂತ್ರವಾದಂಥವು ಕೆಲವನ್ನು ನೀಡಿದ್ದಾರೆ. ಅವುಗಳಲ್ಲಿ ಅವರದೇ ಆದಂಥ ಕೆಲವು 'ಪುಟಾಣಿ'ಗಳ ಸೊಗಸನ್ನು ಸವಿಯಬಹುದು.

"ಜನರು ಕರ್ಣಾಟಕದವರು ಬಲು
ಘನರು; ದಾನದ ದೃಢದ ಪದ್ಮಾ-
ಸನರು; ಪರಹಿತಕಾಗಿ ಜೀವವ ತೇದು ವಾಮನರು;
ವಿನಯದಿಂದ್ಯೆತರಲಿ, ನೋಣ್ ಕಡು-
ಮುನಿಸಿನಿಂದಲೆ ಬರಲಿ, ಕರೆದು ಒಳ-
ಮನೆಯ ಸರ್ವಸ್ವವನು ಸುರಿವರು ಕರ್ಣನಾಟಕರು!"

ಕನ್ನಡಿಗರ ಆತ್ಮಘಾತುಕ ಔದಾರ್ಯದ ವಿಡಂಬನೆ ಎಷ್ಟು ಮರ್ಮಭೇದಕವಾಗಿದೆ ನೋಡಿರಿ!

"ಹರ ಮಾರಾರಿ!
ಹರಿ ಮುರಾರಿ!
ಹರಿಹರರ್ಗೇಕೀ ಮಾರಾಮಾರಿ?"

ಮಕ್ಕಳಿಗೂ ರುಚಿಸ ಬಹುದಾದಂಥ ಪ್ರಾಸ ವೈಚಿತ್ರ್ಯದ ರೂಪದಲ್ಲಿ, ಶೈವ-ವೈಷ್ಣವ ಮತೀಯರ ಅರ್ಥವಿಲ್ಲದ ಅನರ್ಥಕಾರೀ 'ಮಾರಾಮಾರಿ'ಯ ಚಿತ್ರ ನಗೆಯ ಅಂಜನದಿಂದ ನಮ್ಮ ಕಣ್ಣು ತೆರೆಯಿಸುವಂತಿದೆ!

"ಕಂಡೋರ್ ಹೆಣ್ತೀನ್ ಹುಡುಕೋರ್ಗಿರೊ
ನರಕ ತಿನ್ಸಿ ಠಕ್ಕರ್!
ಇಲ್ದೋರ್ಗ್ ಅಲಿಯೋ ಸಂಭ್ರಂದಲ್ಲಿ
ಇರೋಳ್ ಕೊಟ್ಟಾಳ್ ಚಕ್ಕರ್!"

ತಾನು ಮಾಡುವ ಅನ್ಯಾಯ-ಅಪರಾಧ ತನಗೆ 'ತಿರುಗುಬಾಣ'ವಾಗಿ ತಾಗಬಹುದೆಂಬ ಎಚ್ಚರಿಕೆಯ ಮಾತಿನಲ್ಲಿಯ ಮೊನಚು-ಮಾರ್ಮಿಕತೆ;

"ಗಾಜು ಗೊಂಬೆಯ ಮಗು ಮುರಿದುಗಿರಿದೀತು!
ಬೆಲೆ ಹೆಚ್ಚು! ಮೂರು ರೂಪಾಯಿ!
ಮಗುವನೆಲ್ಲಾದರೂ ಕರೆದೊಯ್ಯೊ! ಹೋಗೊ!"-
ಎಂದು ಆಳ ಗದರಿಸಿದಳು ತಾಯಿ!"

ಕಾಜು ಗೊಂಬೆಯ ತಂದಿರುವದು ಮನೆಯ ಅಲಂಕಾರಕ್ಕಾಗಿ, ಮಗುವಿಗೆ ಆಟಕ್ಕಾಗಿ ಅಲ್ಲವೆಂಬಂತೆ ನಡೆದುಕೊಳ್ಳುವ,ಮಕ್ಕಳ ಮನಸ್ಸು-ಸಂತೋಷದ ಅರಿವಿಲ್ಲದ, ತಾಯ್ತನದ ಅಕ್ಕರೆ-ಜವಾಬುದಾರಿಯಿಲ್ಲದ ಆಧುನಿಕ (ಸುಧಾರಿಸಿದ) ಸ್ತ್ರೀಯ ಅವಿವೇಕತನ ಬಯಲಿಗೆಳೆಯುವ ಪರಿಹಾಸ;

"ಹೊರಗೆ ಹೊರಟಿತು ಗಂಡು, ಸಿನಿಮಾ ಹೋಟೆಲು ಬಿಲ್ಲು
ಮೂರುವರೆ ರೂಪಾಯಿ-ಮೂವರೆ ಜನಕೆ!
ಮನೆಯಲುಳಿಯಿತು ಹೆಣ್ಣು, ಅದಕೆ ಬೀಸುವ ಕಲ್ಲು;
ತಪ್ಪಿದರೆ ಒಲೆ, ಮುಸುರೆ, ನೊರ, ಹಾರೆ, ಒನಕೆ!"

ಗಂಡಿನ ಪಾಲಿಗೆ ಮನೆಹೊರಗಿನ ಚೈನೀ ಜೀವನ, ಅದಕ್ಕೆ ಪ್ರತಿಯಾಗಿ ಹೆಣ್ಣಿನ ಮನೆಯೊಳಗಿನ ಯಾಂತ್ರಿಕವಾದ ಕಷ್ಟದ ಬದುಕು ಇವುಗಳ ತಾರತಮ್ಯದ ಎದೆಕರಗಿಸುವಂಥ ರೇಖಾಚಿತ್ರಣ;

"ತನಿಯುಂಡು ಮಿರುಗಿದವ
'ಇರುಳು ಸಾವಿರಕಣ್ಣಿನ ಕ್ಷತ್ರ'ವೆಂದ,
ಹಿಡಿಯುಣದೆ ಸೊರಗಿದವ
'ಕೀವುಕಾರುವ ಹುಣ್ಣು' ಎಂದದನೆ ಕೊಂದ."

"It is the mind that makes hell of heaven and heaven of hell" 'ದೃಷ್ಟಿಯಂತೆ ಸೃಷ್ಟಿ'. ಎಂಬ ಜೀವನ ಸತ್ಯದ ಚಿಂತನಾಂಶವನ್ನು ಕಾವ್ಯಾತ್ಮಕವಾಗಿ ರೂಪಿಸುವ ಕಲಾತ್ಮಕತೆ;—

ಇವು ಒಂದೊಂದೂ ರಸಿಕರ ಕಣ್ಮನಗಳನ್ನು ಸೆಳೆಯಲು ಶಕ್ತವಾಗಿವೆ. ಸಮಾಜ ಜೀವನಕ್ಕೆ ಕನ್ನಡಿ ಹಿಡಿಯುವ ಈ 'ಪುಟಾಣಿ' ಚಿತ್ರಗಳು 'ಗಾತ್ರವೊ ಕಿರಿದು ಗುಣವೊ ಹಿರಿದು' ಎಂಬ ಮಾತಿಗೆ ಸಾಕ್ಷಿಯಾಗಿವೆ!

ಒಟ್ಟಾರೆ ಈ ಸಾಹಿತ್ಯಪ್ರಕಾರಕ್ಕೆ [ನಾಮಕರಣ ಮಾಡದೇ ಹೋದರೂ] ನಾಂದಿ ಹಾಡಿ, ಇದರ ಶಕ್ತಿಸ್ವಾರಸ್ಯ-ಸಾಧ್ಯತೆಗಳನ್ನು ಎತ್ತಿ ತೋರಿದ ಸರ್ವ ಶ್ರೇಯಸ್ಸು ಶ್ರೀ ಜಿ. ಪಿ. ರಾಜರತ್ನಂ ಅವರಿಗೆ ಸಲ್ಲುತ್ತದೆ.

೨

'ನೂರು ಪುಟಾಣಿ' ರೂಪದಲ್ಲಿ ಶ್ರೀ ಜಿ. ಪಿ. ರಾಜರತ್ನಂ ಅವರು ಬಿತ್ತಿದ ಬೀಜ 'ಚುಟುಕ'ವಾಗಿ ತಲೆಯೆತ್ತಿ ನಳನಳಿಸುವಂತೆ ಮಾಡಿದವರು ಶ್ರೀ ವಿ. ಜಿ. ಭಟ್ಟ ಅವರು. ೧೯೪೬ ರಲ್ಲಿಯೇ ಪ್ರಕಟವಾಗಬೇಕಿದ್ದ 'ಚುಟಕ' ಎಂಬ ಅವರ ಸಂಕಲನ ೧೯೪೮ರಲ್ಲಿ ಬೆಳಕು ಕಂಡಿತು. ಮಧ್ಯಂತರದಲ್ಲಿ ಬರೆದ ಇನ್ನಿಷ್ಟು ಪದಗಳನ್ನು ಅದಕ್ಕೆ ಸೇರಿಸಿ 'ತುಂಟನ ಪದಗಳು' ಎಂಬುದನ್ನಾಗಿ ಅವರದನ್ನು ೧೯೫೧ರಲ್ಲಿ ಪ್ರಕಟಿಸಿದರು. ಈ ಸಂಕಲನ 'ಚುಟುಕು' ಸಾಹಿತ್ಯದ ಎರಡನೆಯ ಘಟ್ಟ.

ಈ ಸಂಕಲನದ ಪೂರ್ವಾವಸ್ಥೆಯ 'ಚುಟುಕ' ಸಂಗ್ರಹಕ್ಕೆ ೧೯೪೬ರಲ್ಲಿ-ಯೇ ಬರೆದ ಮುನ್ನುಡಿಯಲ್ಲಿ ಶ್ರೀ ವಿ. ಕೃ. ಗೋಕಾಕ ಅವರು ಕನ್ನಡದ ಚುಟು-ಕದ ಪರಂಪರೆಗೆ ಇಂಗ್ಲೀಷಿನ ಲಿಮರಿಕ್ (Limeric) ಕೂಡ ಸೇರುತ್ತದೆ ಎಂಬ ಹೊಸ ಅಂಶವೊಂದನ್ನು ಎತ್ತಿ ತೋರಿಸಿದ್ದಾರೆ. ಮುಂದುವರಿದು, ಕನ್ನಡದ ಚುಟುಕು ಶ್ರೀ ವಿ. ಜಿ. ಭಟ್ಟರ ಪ್ರತಿಭೆಯ ಪ್ರಭೆಯಲ್ಲಿ ಮಿಂದೆದ್ದು ಪಡೆದ ನೂತನಾವಿಷ್ಕಾರವನ್ನು ಗಮನದಲ್ಲಿರಿಸಿಕೊಂಡು 'ಚುಟುಕ'ದ ಸ್ವರೂಪದ ಸುಂದರ ಚಿತ್ರವನ್ನು ಸ್ವಲ್ಪದರಲ್ಲಿ ಅವರು ಹೀಗೆ ಬಿಡಿಸಿದ್ದಾರೆ:

"ಚುಟಕ ಒಂದು ಲಘು ಗೀತ. ಪ್ರಾಸದ ಮೊನೆ, ಮಾತಿನ ಹದನ, ಛಂದಸ್ಸಿನ ಬಿಗುವು, ನಿರೂಪಣೆಯ ಮಿತವ್ಯಯ—ಈ ಕಾವ್ಯಪ್ರಕಾರದ ಮುಖ್ಯ ಸಾಧನ—ಸಾಮಗ್ರಿ. ಹಾಸ್ಯ, ವಿಡಂಬನೆ, ಸೌಂದರ್ಯಾನುಭವ, ವಿಮರ್ಶೆ—ಸಾಹಿತ್ಯಕ್ಕೆ ಇದ್ದ ಅನಂತ ಮುಖಗಳು ಚುಟಕಕ್ಕೂ ಇವೆ. ಆದರೆ ಕಿರಿದರಲ್ಲಿ ಹಿರಿಯ ಅರ್ಥ ಮೂಡಿ ಬಂದಿರಬೇಕು."

ಭಟ್ಟರ ಚುಟುಕುಗಳಲ್ಲಿ ಎದ್ದು ಕಾಣುವ ಕಲ್ಪನಾ ವೈಚಿತ್ರ್ಯ ರಸಿಕರ ಹೃನ್ಮನಗಳನ್ನು ಸೆರೆಹಿಡಿಯದಿರಲಾರದು.

"ಜೀವನ ಕ್ಷಣ
ದೇಹವು ತೃಣ,
ಭಟ್ಟರ ಬಾಯ್ ಅಂದಿತು.
ಸನಿಯು ನಿಂತ
ಗೂಳಿಗೆಂಥ
ಬುದ್ಧಿ! ಮೇಯ ಬಂದಿತು!"

(ಬುದ್ಧಿವಂತ ಗೂಳಿ)

*  *  *  *

"ಮಂತ್ರವ ಗೊಣಗುತ
ಭಟ್ಟರು ಮೂಗಿಗೆ
ನಾಸೀಪುಡಿಯನು ಏರಿಸಲು
ಸೀನುಗಳಿಂದ
ಎದುರಿನ ನಂದಾ—
ದೀಪವನೊಮ್ಮೆಲೆ ಆರಿಸಲು
ಮೊದಲೇ ಬಿರು ಬಿರುಕಾಗಿದ್ದಾ ಹಳೆ
ಮುದಿ ಮಾರುತಿ ಮೂರುತಿಯಾ ಮೈಶಿಲೆ
ಆಯಿತು ಎರಡೂವರೆ ಹೋಳು
ಅದರೊಳಗಿಂದ
ಹಿರಿ ಕಿರಿ ತಂಡ
ತಂಡದಿ ಬಂದವು ಕರಿ ಚೇಳು!"

(ಪೂಜೆ)

*  *  *  *

"ನಾಕಕ್ಕೆ ಎರಡಾದರೆ, ಎರಡಕ್ಕೆ
ಆಗುವದೋ ಒಂದು
ಅಣ್ಣಾ, ಗುರುಗಳು ಕಲಿಸಿದರೆಮಗೆ
ತ್ರೈರಾಶಿಕ ಇಂದು.
ದನಗಳಿಗೆಲ್ಲಾ ಕೋಡುಗಳೆರಡು
ಕಾಲುಗಳಿವೆ ನಾಕು
ಎರಡೇ ಕಾಲುಗಳಿರುವೀ ನಮಗೆ

ಕೋಡೊಂದಿರಬೇಕು!
ಆದರೆ ನಮಗೆ ಕೋಡೇ ಇಲ್ಲ
ಅಣ್ಣಾ, ಸಾಲೆಯ ಗುರುಗಳು ನಮಗೆ
ಕಲಿಸಿದರೋ ಸುಳ್ಳ"

(ತ್ರೈರಾಸಿಕ)

ಇವರ ಕಲ್ಪನಾವೈಚಿತ್ರ್ಯಕ್ಕೆ ಸಮಾಜ ಜೀವನ ಮಾತ್ರವಲ್ಲ, ದೇವ ದೇವತೆಗಳಿಗೆ ಸಂಬಂಧಿಸಿದ ನಂಬಿಕೆಗಳೂ ಆಹಾರವಾಗಿವೆ. ಭಗವಾನ ವಿಷ್ಣು ಕ್ಷೀರಸಾಗರದಲ್ಲಿ ಆದಿಶೇಷನ ಮೇಲೆ ಮಲಗಿಕೊಂಡಿದ್ದಾನೆಂದೂ, ಆತನ ಕಾಲು ದೆಸೆಯಲ್ಲಿ ಕೂತುಕೊಂಡು ಲಕ್ಷ್ಮಿ ಆತನ ಪಾದಸೇವೆ ಮಾಡುತ್ತಿದ್ದಾಳೆಂದೂ, ನಂಬಲಾಗಿದೆ. ಆದರೆ ನಮ್ಮ ಈ ವಿಚಾರವಾದಿ ಕವಿಗನಿಸುತ್ತದೆ: ನಮ್ಮ ಈ 'ಉಪ್ಪಿನ ಸಮುದ್ರ'ವೇ ಒಂದು ಕಾಲದಲ್ಲಿ ಆ 'ಕ್ಷೀರಸಾಗರ'ವಾಗಿರಬೇಕು! ಹಾಗಾದರೆ ಈ ಪರಿವರ್ತನೆ ಹೇಗಾಯಿತು? ಏಕಾಯಿತು?...... ...ಕವಿವಾಣಿ ಕೇಳಿ:

"ಶೇಷಶಾಯಿಯ ಕಾಲನೊತ್ತುತ
ಬಳಲಿ ಲಕ್ಷ್ಮಿಯು ಅತ್ತಳು
ಹಾಲಿನಾ ಕಡಲನ್ನು ಕಹಿ ಕಹಿ
ಉಪ್ಪು ಮಾಡಿಯೆ ಬಿಟ್ಟಳು!"

ಕಣ್ಣೀರು ಉಪ್ಪು-ಉಪ್ಪಾಗಿರುವ ಅನುಭವ ಯಾರಿಗಿಲ್ಲ? ಯುಗ ಯುಗಗಳಿಂದ ಪತಿದೇವನ ಕಾಲೊತ್ತುತ್ತ ಕುಳಿತಂಥ ಲಕ್ಷ್ಮಿ ಸೋತು-ಬಹುಶಃ ಇದರಿಂದ ತನ್ನ ಬಿಡುಗಡೆ-ವಿರಾಮವೇ ಇಲ್ಲವೇನೋ ಎಂದುಕೊಂಡು-ಅತ್ತಳಂತೆ! ಆಕೆಯ ಆ ಕಣ್ಣೀರಿನ ಉಪ್ಪಿನಾಂಶವೇ 'ಕ್ಷೀರಸಾಗರ'ವನ್ನು ಉಪ್ಪಿನಕಡಲನ್ನಾಗಿ ಪರಿವರ್ತಿಸಿತಂತೆ!

ಭಟ್ಟರ ಚುಟುಕಗಳಲ್ಲಿ ಮೆಚ್ಚಿಕೊಳ್ಳಬಹುದಾದ ಮತ್ತೊಂದು ಗುಣವಿದೆ; ಅದು ಜನಜೀವನದ ವಿಮರ್ಶೆ—ವಿಡಂಬನೆ!

ಕ್ಷೌರಿಕರಿಂದ ಮೂಗಿನ ಕೂದಲಗಳನ್ನು ಕತ್ತರಿಸಿಕೊಳ್ಳುವದುಂಟು. ಆದರೆ ಇಂದಿನ ನಗರ ಜೀವಿಗಳಿಗೆ ಅದರ ಅವಶ್ಯಕತೆಯೇ ಇಲ್ಲವಂತೆ. ಏಕೆಂದರೆ ಆ ಕೆಲಸವನ್ನಿಂದು ನಮ್ಮ ನಗರ ಸಭೆಗಳೇ ಅದ್ಭುತವಾದ ರೀತಿಯಲ್ಲಿ ಮಾಡುತ್ತಿವೆಯಂತೆ!.........

"ಅಬ್ಬಾ ನಗರದ ಕೊಳಚೆಯ ಸಂದಿ!
ಉದುರಿತು ಮೂಗಿನ ಎಲ್ಲಾ ರೋಮ.
ಹೇಗೆ ಇರುವರೋ ಇಲ್ಲಿಯ ಮಂದಿ!
ಇವರಿಗೆ ಬೇಡವೆ ಬೇಡ ಹಜಾಮ!!

(ನಗರದ ಹೊಲಸು)

ಮೇಲಿನ ವಿಡಂಬನೆಗೆ ಕಲ್ಪನಾ ವೈಚಿತ್ರ್ಯವೇ ಕಾರಣೀಭೂತವಾಗಿದ್ದರೆ, ಕೆಳಗಿನ ಕಟಕಿಗೆ ಸರಳವೆಂದೆನ್ನಿಸುವ ವಕ್ರನಿರೂಪಣೆ. ಅದನ್ನರಿಯಬೇಕಾದರೆ ನಾವು ನಮ್ಮ ತಲೆ ತುರಿಸಿಕೊಳ್ಳಬೇಕಾಗುತ್ತದೆ; 'ತರ್ಕ'ದ ನೆರವು ಯಾಚಿಸ-ಬೇಕಾಗುತ್ತದೆ.

"ಕಳ್ಳರ ಎಡಕೂ ಬಲಕೂ ಇರುವರು
ಪೋಲೀಸರು ನೋಡು.
ಮಂತ್ರಿಗಿಂತ್ರಿಗಳು ಇಳಿದಲ್ಲೆಲ್ಲಾ
ಪೋಲೀಸರ ಬೀಡು!"

(ತರ್ಕ)

ಇಲ್ಲಿ ಕಳ್ಳರಿಗೂ ಪೋಲೀಸರಿಗೂ ಇರುವ ಪೋಲೀಸ ಕಾವಲಿನ ಸಮಾನ ಧರ್ಮದ ಹೋಲಿಕೆಯೊಡನೆ ಕವಿಯು ಮಂತ್ರಿಗಳ ಕಳ್ಳತನವನ್ನು ಎಷ್ಟು ಧ್ವನಿಪೂರ್ಣವಾಗಿ ಬಯಲಿಗೆಳೆದಿದ್ದಾನೆ! ಇಂಥ ಬೌದ್ಧಿಕ ಕಟಕಿ ಭಟ್ಟರ ಚುಟುಕುಗಳ ವಿಶೇಷವೆನ್ನಬೇಕು.

ಯಾರೆಲ್ಲರ ಮನವನ್ನು ಸೂರೆಗೊಳ್ಳುವ ಇನ್ನೊಂದು ಅದ್ಭುತ ಅಂಶ ಭಟ್ಟರ ಚುಟುಕುಗಳಲ್ಲಿದೆ. ಅದು ಅವರು ನಕ್ಕು ನಗಿಸುವ ನಗೆ, ಮೃದು ಮಧುರ ಹಾಸ್ಯ! ಸಿಟ್ಟು ಯಾರಿಗೆ ಬರುವದಿಲ್ಲ? ಅದು ಮನುಷ್ಯ ಮಾತ್ರರೆಲ್ಲರ ಹುಟ್ಟುಗುಣ. ತನ್ನ ತಾಯಿ ತಂದೆಯರಿಗೆ ಸಿಟ್ಟುಬಂದಾಗ ಅವರು ಹೇಗೆ ನಡೆದುಕೊಳ್ಳುವರೆಂಬುದನ್ನು ಮಗು ಬಣ್ಣಿಸುವ ಬಗೆ ಹೇಗಿದೆ ನೋಡಿರಿ;

"ಅವ್ವಗೆ ಬಂದರೆ ತುಸುವೇ ಸಿಟ್ಟು,
ಅಪ್ಪನು ಹೋಗುವ ಮನೆಯನು ಬಿಟ್ಟು;
ಅಪ್ಪಗೆ ಬಂದರೆ ಅದ್ಭುತ ಸಿಟ್ಟು,
ಅವ್ವ ಮಾಡುವಳು ಥಾಲಿಪಿಟ್ಟು!"

ಕುತೂಹಲವೇ ಮೈಗುಣವಾದ ಮಗುವಿಗೆ ತಾಯಿ-ತಂದೆಯರ ಸಿಟ್ಟು ಪರಸ್ಪರರಲ್ಲಿ ಉಂಟುಮಾಡುವ ಪ್ರತಿಕ್ರಿಯೆಯನ್ನು ಕಂಡು, ತಾನೂ 'ಸಿಟ್ಟು' ಮಾಡಿ ಏನಾಗುವದೋ ನೋಡಿದರಾಯಿತು ಅನಿಸುತ್ತದೆ.

"ತಂದೆ ತಾಯಿಗಳ ಹಾಗೇ ತಾನೂ
ಮಾಡಲು ಹೋದನು ಸಿಟ್ಟ
ಅವ್ವನು ಕಿವಿಗಳ ಹರಿದಳು; ಅಪ್ಪನು
ಕಿತ್ತೇ ಬಿಟ್ಟನು ಜುಟ್ಟ!"

(ಹುಡುಗನ ಸಿಟ್ಟು)

ಕಲ್ಪನಾವೈಚಿತ್ರ್ಯದಿಂದೊಡಗೂಡಿದ ಇಲ್ಲಿಯ ಭಾವಾವಿಷ್ಕಾರ ಮನಾಕರ್ಷಕವಾಗಿದೆ.

"ನಾಸೀಪುಡಿಯನು
ಮೂಗಿಗೆ ತುರುಕಿ
ಸೀನಿದ ನೆರೆಮನೆ ಶಾಂಭಟ್ಟ.
ಎಚ್ಚರ ತಪ್ಪಿತು
ಸನಿಯದ ಮುದುಕಿ
ಅದುರಿತು ನೆಲ, ನಮ್ಮನೆ ಅಟ್ಟ!"

(ಶಾಂಭಟ್ಟನ ಸೀನು)

* * * *

"ನಮ್ಮೂರ ಗಣಪ
ಜೋಯಿಸರಿಗೆ ಉಪ-
ವಾಸವು ಶನಿವಾರ.
ಉಪವಾಸದ ದಿನ
ಬರೀ ಹಾಲು ಗೆಣ-
ಸಿನದೇ ಅವರಿಗೆ ಫಲಹಾರ.
ಆ ಪುಣ್ಯದ ಫಲ-
ದಿಂದೇ ಈ ನೆಲ-
ದಲಿ ಸಾಗಿದೆ ಆ ಸಂಸಾರ.
ಮೊನ್ನಿನ ಆ ದಿನ

ಒಂದೆರಡೇ ಮಣ
ಗೆಣಸನು ತೇಗಿ
ಹೊಟ್ಟೆಯು ಬೀಗಿ
ಹರಿದೇ ಹೋಯಿತು ಉಡದಾರ,
ಅಲ್ಲ, ಜನಿವಾರ!"

(ಉಪವಾಸ)

ಶಾಂಭಟ್ಟನ ಸೀನುವಿಕೆಯಿಂದಾದ ಅನಾಹುತ; ಗಣಪ ಜೋಯಿಸರು 'ಉಪವಾಸ'ದ ಹೆಸರಿನಲ್ಲಿ ಒಂದೆರಡು ಮಣ ಗೆಣಸು ತಿಂದು ಹೊಟ್ಟೆಯುಬ್ಬಿಸಿ-ಕೊಂಡುದರ ಪರಿಣಾಮವಾಗಿ ಉಡುದಾರ ಮಾತ್ರವಲ್ಲ ಜನಿವಾರವೇ ಹರಿದು ಹೋಗುವಂಥ ಪರಿಸ್ಥಿತಿ ಬಂತೆನ್ನುವದು—ಇಲ್ಲಿಯ ಅತ್ಯುಕ್ತಿಯಿಂದೊಡಗೂಡಿದ ವಿನೋದ ಪೂರ್ಣವಾದ ವಿಡಂಬನೆ ಹೃದ್ಯವಾಗಿದೆ.

ಒಟ್ಟಿನಲ್ಲಿ ವಿ. ಜಿ. ಭಟ್ಟರ ಕೈಯಲಿ 'ಚುಟುಕು' ಸಾಹಿತ್ಯದ ಬುನಾದಿ ಭದ್ರವಾಗಿ ಅದರ ನೆಲೆ-ಬೆಲೆ ಹೆಚ್ಚುವಂತಾಗಿದೆ. "ಇಲ್ಲಿಯ ಕಲ್ಪನಾ ವೈಚಿತ್ರ್ಯ, ವಿನೋದ, ಸಭ್ಯತೆ, ಇವೆಲ್ಲ ಗುಣಗಳು ಈ ಚುಟ್ಕಗಳನ್ನು ಹಿರಿಯರಿಗೂ ಕಿರಿಯರಿಗೂ ಕೂಡಿಯೇ ಪ್ರಿಯವಾಗಿಸುವದರಲ್ಲಿ ಸಂಶಯವಿಲ್ಲ" ಎಂದು ವಿ. ಕೃ. ಗೋಕಾಕರು ಮುನ್ನುಡಿಯಲ್ಲಿ ಆಡಿದ ಮಾತು ಸಾರ್ಥಕವಾಗಿದೆ.

೩

ಈ ರೀತಿಯಲ್ಲಿ ಸರ್ವಶ್ರೀ ಜಿ. ಪಿ. ರಾಜರತ್ನಂ ಹಾಗೂ ವಿ. ಜಿ. ಭಟ್ಟರು ಬೆಳೆಯಿಸಿದ 'ಚುಟುಕು' ಸಾಹಿತ್ಯದ ಸಸ್ಯ ಇನ್ನೂ ಹೆಚ್ಚಿಗೆ ನನೆಕೊನೆ ಯೇರುವಂತೆ ನೀರೆರೆದು ಪೋಷಿಸಿದವರು. ಶ್ರೀ ಎಂ. ಅಕಬರ ಅಲಿ ಹಾಗು ಶ್ರೀ ತೋಫಖಾನೆ ಶ್ರೀನಿವಾಸ ಅವರು. ೧೯೫೦ರಲ್ಲಿ ಇವರಿಬ್ಬರೂ ಜತೆಯಾಗಿ ಪ್ರಕಟಿಸಿದ 'ಅನ್ನ' ಅಥವಾ 'ಎವರ್‌ಟಿ ಚುಟುಕುಗಳು' ಎಂಬ ಸಂಕಲನ ಚುಟುಕು ಸಾಹಿತ್ಯದ ಮೂರನೆಯ ಮಹತ್ವದ ಘಟ್ಟವಾಗಿದೆ. ಕನ್ನಡದ ಚುಟುಕದ ಪರಂಪರೆ-ಯಲ್ಲಿ ಇಂಗ್ಲೀಷಿನ 'ಲಿಮೆರಿಕ್' ಆಗಲೇ ಕೆಲಮಟ್ಟಿಗೆ—ವಿ. ಜಿ. ಭಟ್ಟರ ಮುಖಾಂತರ—ತನ್ನ ಜೀವಸತ್ವವನ್ನೊದಗಿಸಿದ್ದಿತು. ಇದೀಗ ಈ ಇಬ್ಬರಿಂದ ಇದರ ಸತ್ವ ಇನ್ನೂ ವಿಶೇಷವಾಗಿ ಲಭಿಸಿ 'ಚುಟುಕ'ದ ಬಲ ಸಂವರ್ಧನೆಯುಂಟಾಯಿತು.

"ಮಾತಿನ ಬಿಗುವು, ಹಾಗೂ ಚಮತ್ಕಾರ, ಅದು ಎದ್ದು ಕಾಣುವಂತೆ, ಅದನ್ನು ಕಳೆಗಟ್ಟಿಸುವ ಪ್ರಾಸ, ಸೂಕ್ಷ್ಮ ವಿಮರ್ಶೆ, ಕೊನೆಯ ಸಾಲಿನಲ್ಲಿ ಅನಿರೀಕ್ಷಿತವಾಗಿ ಬರುವ ಭಾವಾವಿಷ್ಕರಣ ಇಲ್ಲವೆ ಮುಕ್ತಾಯ—ಇವು 'ಲಿಮೆ-

ರಿಕ್' ಹಾಗೂ ಚುಟ್ಕದ ವಿಶೇಷ ಲಕ್ಷಣಗಳು, ಕಾವ್ಯ ಪುರುಷನು ಒಮ್ಮೊಮ್ಮೆ ಕಾಲಭೈರವನಾಗುವುದುಂಟು. ಆಗ ಬಿಳಿ ಕರಿ ಚೇಳುಗಳು ಅವನ ಆಭರಣಗಳಾಗುತ್ತವೆ. ಚುಟ್ಕಗಳು ಇಂಥ ಆಭರಣಗಳು. ಚೇಳು ಬಿಳಿಯದಿರಲಿ, ಇಲ್ಲವೆ, ಕರ್ರಗಿರಲಿ. ಅದರ ಕೊಂಡಿಯ ಮೊನೆ ಏಳು ಲೋಕಗಳನ್ನೂ ಎಚ್ಚರಿಸಬಲ್ಲುದು. ಅದು ವಿಷದ ಮೊನೆಯಲ್ಲ. ಸೂಜಿ ಮದ್ದಿನ ಸೂಜಿ, ವಿಷವೇದರೂ ಸಮಾಜದ ದೇಹ ಕ್ರಿಯೆಗೆ ಬೇಕಾದ ವಿಷ; ಅಂತೇ ಪರಮೌಷಧಿ" 'ಅನ್ನ'ದ ಮುನ್ನುಡಿಯಲ್ಲಿ ಶ್ರೀ ವಿ ಕೃ ಗೋಕಾಕರು ಹೇಳಿದ ಈ ಮಾತು ಚುಟುಕದ ಸ್ವರೂಪದ ಮೇಲೆಯೂ 'ಅನ್ನ'ದ ಚುಟುಕುಗಳ ಮೇಲೆಯೂ ಬೆಳಕು ಚೆಲ್ಲುತ್ತವೆ.

ಈವರೆಗಿನ 'ಚುಟುಕು'ಗಳಿಗೆ ಯಾವದೇ ವಿಧವಾದ ಒಂದು ಛಂದೋಬಂಧ ಇರಲಿಲ್ಲ. ಐದು ಚರಣಗಳ ಲಿಮರಿಕ್ ಛಂಧಸ್ಸು ಶ್ರೀ ವಿ. ಜಿ. ಭಟ್ಟರ ಚುಟುಕುಗಳಲ್ಲಿ ಕಂಡೂ ಕಾಣದಂತೆ ಕಾಣಿಸಿಕೊಂಡಿದ್ದಿತು. ಆದರೆ ಈ 'ಅನ್ನ' ಸಂಗ್ರಹದಲ್ಲಿ ಅದು ಮೊದಲಬಾರಿಗೆ ಸ್ಫುಟವಾಗಿ ಮೂಡಿತು. ಇದರ ಒಂದು, ಎರಡು ಹಾಗು ಐದನೆಯ ಸಾಲುಗಳು ದೀರ್ಘವಾಗಿಯೂ, ಸಮವಾಗಿಯೂ ಆಗಿದ್ದು, ಅಂತ್ಯ ಪ್ರಾಸವನ್ನು ಒಳಗೊಂಡಿರುತ್ತವೆ. ನಡುಮಧ್ಯದ ಮೂರು ಮತ್ತು ನಾಲ್ಕನೆಯ ಸಾಲುಗಳು ಅವುಗಳಿಗಿಂತ ಕಿರಿದಾಗಿದ್ದು ಸಮನಾಗಿರುತ್ತವೆ; ಅವುಗಳಲ್ಲಿ ಒಮ್ಮೊಮ್ಮೆ ಅಂತ್ಯಪ್ರಾಸ ಕಾಣಿಸಿಕೊಳ್ಳುವುದೂ ಉಂಟು.

'ಅನ್ನ' ಸಂಗ್ರಹಕ್ಕೆ ಬರೆದ ಮುನ್ನುಡಿಯಲ್ಲಿ ಶ್ರೀ ವಿ. ಕೃ. ಗೋಕಾಕರು ಮಾಡಿದ ಈ ಚುಟುಕುಗಳ ಸಮಾಲೋಚನೆ ಇಂತಿದೆ:

"ಶ್ರೀ ಆಕಬರಅಲಿ ಅವರ ಅಷ್ಟಷಟ್ಪದಿಗಳ ಶೈಲಿಯ ಬಿಗುವನ್ನು ಭಾವನಿರ್ಭರತೆಯನ್ನು ರಸಿಕರು ಆಗಲೇ ಕಂಡುಕೊಂಡಿದ್ದಾರೆ. ಆ ಹಾದಿಯಲ್ಲಿಯೇ ಶ್ರೀ ಆಕಬರ ಅಲಿ ಅವರು ಮುಂದಡಿಯಿಟ್ಟಿದ್ದಾರೆ. ಅವರ ಕಾವ್ಯವು ಇಲ್ಲಿ ತೊಟ್ಟ ತೊಡುಗೆ ಇನ್ನಿಷ್ಟು ಚೆಲುವಾಗಿ ಅದಕ್ಕೆ ಒಪ್ಪುತ್ತಿದೆ. ಶ್ರೀ ತೋಫಖಾನೆಯವರ ಚುಟ್ಕಗಳಲ್ಲಿಯೂ ಅದೇ ಸಂಯಮವನ್ನು ನಾವು ಅನೇಕ ಸಲ ಕಾಣುತ್ತೇವೆ. ಈ ಸ್ನೇಹಿತರಿಬ್ಬರ ಪ್ರಥಮಾಕ್ಷರಗಳು ಸೇರಿ 'ಎಮ್‌ಟಿ' ಎಂಬ ಆಂಗ್ಲ ಶಬ್ದವು ಸಿದ್ಧವಾಗುತ್ತಿದ್ದರೂ, ಒಂದೊಂದು ಚುಟ್ಕವೂ ಅರ್ಥಗರ್ಭಿತವಾದುದನ್ನು ರಸಿಕರು ಕಾಣದೆ ಇರಲಾರರು. ಉದಾತ್ತ ಜೀವನಾದರ್ಶಗಳ ಬೆಳಕಿನಲ್ಲಿ ಇಂದಿನ ಸಾಮಾಜಿಕ ಜೀವನವನ್ನು ಅಳೆದು ನೋಡುವುದರಲ್ಲಿಯೇ ಈ ಚುಟ್ಕಗಳ ಸ್ಫೂರ್ತಿಯ ಉಗಮವಿದೆ. ಉಚಿತ ಹಾಸ್ಯವಿಡಂಬನೆಗಳಿಂದ ಈ ಜೀವನ ವಿಮರ್ಶೆ ತನ್ನ ಮೊನೆಯನ್ನು ತೀಕ್ಷ್ಣವಾಗಿಸಿಕೊಂಡಿದೆ."

"ಅಪ್ಪ ಅವ್ವ ಅಣ್ಣ
ದುಡಿದು ದುಡಿದು ಸಣ್ಣ

ಆದರೂನು
ದೊರೆಯಲಿಲ್ಲ
ಒಂದು ತುತ್ತು ಅನ್ನ!"

*  *  *  *

"ಒಂದು ಹರಕು ಚಿಂದಿ
ಇಲ್ಲದಂಥ ಮಂದಿ
ದೇಶವೆಂಬ
ಸೆರೆಯಲಿಂದು
ಆಗಿರುವದು ಬಂದಿ!"

*  *  *  *

"ವಾರದಾರು ದಿನ
ದುಡಿದು ದುಡಿದು ಹೆಣ
ಭಾನುವಾರ
ಎಂದರಾಯ್ತು | ಕುಣಿಯುತ್ತೈತೆ ಮನ!"

ಅಕಬರ ಅಲಿ ಅವರ ಈ ಚುಟುಕುಗಳಿಗೆ ಕರುಣೆಯೇ ಮೂಲ ಸೆಲೆ-ಯಾಗಿದ್ದರೆ, ಅವರ ಇನ್ನಿತರ ಸಮಾಜ ವಿಮರ್ಶೆಯ ಚುಟುಕುಗಳಿಗೆ ವಿಡಂಬನೆ-ಯೇ ಜೀವಾಳವಾಗಿದೆ:

"ನಮ್ಮ ಊರ ಮುಲ್ಲಾ
ಮೋಹರಮ್‌ದಲೆಲ್ಲಾ
ಮಂತ್ರವೆಂದು
ಏನೊ ಗೊಣಗಿ
ಗಿಟ್ಟಿಸುವನು ಬೆಲ್ಲಾ."

*  *  *  *

"ಸಕಲ ಬಯಕೆಗಳನು
ಫಲಿಸಿಕೊಳಲು ನೀನು
ಮಂತ್ರಿ ಅಳಿಯ
ಆಗೊ ಗೆಳೆಯ
ಅದುವೆ ಕಾಮಧೇನು!"

*  *  *  *

ಇದಕ್ಕೆ ಬದಲಾಗಿ ತೋಫಖಾನೆ ಶ್ರೀನಿವಾಸರ ಚುಟುಕುಗಳಲ್ಲಿ ವಿನೋದ, ವಿಡಂಬನೆಗಳೆರಡೂ ಕೂಡಿಯೇ ಉಕ್ಕಿವೆ:

"ನಮ್ಮ ಕ್ಲಾಸ ಮಾಸ್ತರು
ಹೇಳಿ ಕೇಳಿ ಸುಸ್ತರು
ಲಂಭಕರ್ಣ
ಕುಂಭಕರ್ಣ
ಅವರೆ ಇವರ ದೋಸ್ತರು!"

*    *    *    *

"ಪುಸ್ತಕ ತೆರೆದರೆ ಆಕಳಿಕೆ
ಬರುವದು ಭರದಲಿ ತೂಕಡಿಕೆ
ಓದಿಗೆ ನಿದ್ದಿಗೆ
ಜಿದ್ದೇ ಬಿದ್ದಿದೆ
ಶಂಕರ, ಸಾಕೆಲೆ ಈ ಕಲಿಕೆ!"

*    *    *    *

"ಭಟ್ಟರು ಬಂಟರು ಊಟದಲಿ
ತುಂಟರು ಬಲು ಜಗಳಾಟದಲಿ
ಹೆಂಡಿರು ಹಟದಲಿ
ಹುಡುಗರು ಚಟದಲಿ
ಮಂತ್ರಿಗಳೋ ಕಂತ್ರಾಟದಲಿ."

*    *    *    *

ಒಟ್ಟಿನಲ್ಲಿ ಶ್ರೀ ವಿ. ಕೃ. ಗೋಕಾಕರು ಮುನ್ನುಡಿಯಲ್ಲಿ ನುಡಿದಂತೆ, "ಶ್ರೀ ವಿ. ಜಿ. ಭಟ್ಟರು ಚುಟ್ಕಗಳನ್ನು ರಚಿಸುವದರಲ್ಲಿ ಒಂದು ಅನುಪಮ ಆನಂದವನ್ನು ಅನುಭವಿಸಿದರು. ಇಂತಹ ಆನಂದವನ್ನೇ ತಮ್ಮದೇ ಆದ ಒಂದು ರೀತಿಯಲ್ಲಿ 'ಎಮ್‌ಟೀ' (ಎಂ. ಅಕಬರ ಅಲಿ ಹಾಗು ತೋಫಖಾನೆ ಶ್ರೀನಿವಾಸ) ಅವರು ಅನುಭವಿಸುತ್ತಿದ್ದಾರೆ. ಇವರಿಬ್ಬರ ಕೈಯಲ್ಲಿ 'ಚುಟ್ಕ'ವು ವ್ಯಾಪ್ತಿಯನ್ನು ಪಡೆದಿದೆ."

೪

ಈ ವರೆಗಿನ ಸಮಾಲೋಚನೆಗೆ ವಸ್ತುವಾದುದು ಸುಮಾರು ೧೯೫೨ರ ವರೆಗೆ ಸೃಷ್ಟಿಗೊಂಡಂಥ 'ಚುಟುಕು' ಸಾಹಿತ್ಯ; ಪೂರ್ವಾವಸ್ಥೆಗೆ ಸೇರಿದ ಸಾಹಿತ್ಯ. ಆದರೆ ಇಂದಿನ ಚುಟುಕು, ಪ್ರಬುದ್ಧಾವಸ್ಥೆಗೆ—ಪ್ರೌಢಾವಸ್ಥೆಗೆ-ಸೇರಿದುದಾಗಿದೆ. ಇದು 'ಆಕಾರ'ದಲ್ಲಿ ಹೆಚ್ಚಿನ ಖಚಿತತೆಯನ್ನು ಪಡೆದು, 'ಆಶಯ'ದಲ್ಲಿ ವಿವಿಧ ಕವಲುಗಳಿಗೆಡೆಗೊಟ್ಟು ಆಧುನಿಕ ಕನ್ನಡಸಾಹಿತ್ಯದ ಒಂದು ಗಮನಾರ್ಹಪ್ರಕಾರ-ವಾಗಿ ಬೆಳೆದಿದೆ.

ಹಿಂದಿನ 'ಚುಟುಕು' ಮುಕ್ತಕ-ಚಾಟುಪದ್ಯ-ಎಪಿಗ್ರಂ-ಬಿಡಿಪದ್ಯಗಳ ರೂಪದಲ್ಲಿ ಕಾಣಿಸಿಕೊಂಡಿದ್ದಿತು. 'ಅಮಿಬಾ'ದಂಥ 'ಆಕಾರವಿಲ್ಲದ ಆಕಾರ' ಅದರದಾಗಿದ್ದಿತು. ಅದೇ ಮುಂದೆ 'ಲಿಮರಿಕ್'ದ ಬಂಧಕ್ಕೊಳಗಾಗಿ 'ಪಂಚಪದೀ-ಯಾಗಿದ್ದಿತು. ಆದರೆ ಇಂದದು ಸರ್ವಸಾಮಾನ್ಯವಾಗಿ ಒಂದು ಪ್ರಕಾರದ 'ಚೌಪದಿ' ಯಾಗಿದೆ. ಅದರಲ್ಲೂ ಎರಡು ಮಾದರಿಗಳಿವೆ: ಒಂದು ಶ್ರೀ ದಿನಕರ ದೇಸಾಯಿ' ಅವರದು; ಇನ್ನೊಂದು ಶ್ರೀ ಅಕಬರ ಅಲಿ ಅವರದು. ದೇಸಾಯರ ಚುಟುಕುಗಳ ಚೌಪದಿ ಪ್ರತಿ ಚರಣದಲ್ಲಿ ಐದೈದು ಮಾತ್ರೆಯ ಮೂರು ಗಣಗಳ ಮೇಲೊಂದು ಮೂರು ಮಾತ್ರೆಯ ಗಣವುಳ್ಳ (೫/೫/೫/೨) ಅಂತ್ಯ ಪ್ರಾಸದಿಂದ ಕೂಡಿದ 'ದ್ವಿಪದಿ'ಗಳೆರಡರ ಬೆಸುಗೆಯಾಗಿದೆ. ನಿರ್ದಿಷ್ಟವಾದ ಈ ಪಡಿಯಚ್ಚಿನಲ್ಲಿಯೇ ಅವರ ಚುಟುಕು ರೂಪುಗೊಂಡಿವೆ. ಈ ನಿರ್ದಿಷ್ಟ ಚೌಕಟ್ಟಿನ ಛಂದಸ್ಸಿನಲ್ಲಿಯೇ ಭಾವಾನುಭವವನ್ನು ಎರಕ ಹೊಯ್ಯಬೇಕಾಗಿ ಬಂದುದರಿಂದ ಕೆಲವೊಮ್ಮೆ ಶಿಥಿಲತೆಗೆ ಅವಕಾಶವುಂಟಾಗಿದೆ. ಆದರೆ ಅಕಬರ ಅಲಿ ಅವರ ಚುಟುಕುಗಳ ಚೌಪದಿಗೆ ಅಂಥ ಕಟ್ಟುನಿಟ್ಟು ಇಲ್ಲ. ಅದರ ಆಕೃತಿಯಲ್ಲಿ ಏಕತಾನತೆ ಇಲ್ಲ. ಭಾವಾನುಭವಗಳಿಗೆ ತಕ್ಕ ಹಾಗೆ ಛಂದಸ್ಸು ಹಿರಿದು-ಕಿರಿದಾಗಿ ಹೊಂದಿಕೊಳ್ಳು-ತ್ತದೆ. ಸಾಮಾನ್ಯವಾಗಿ ಒಂದನೆಯ ಹಾಗೂ ಮೂರನೆಯ ಸಾಲುಗಳು ಸಮಾನ ವಾಗಿದ್ದು ದೀರ್ಘವಾಗಿರುತ್ತವೆ; ಎರಡನೆಯ ಹಾಗೂ ನಾಲ್ಕನೆಯ ಸಾಲುಗಳು ಸಮನಾಗಿಯೂ ಕಿರಿದಾಗಿಯೂ ಇದ್ದು, ಅಂತ್ಯಪ್ರಾಸವನ್ನು ಒಳಗೊಂಡಿರುತ್ತವೆ.

ಇಂದಿನ 'ಚುಟುಕು' ಸಾಹಿತ್ಯ ಸುಪುಷ್ಟವಾಗಿ ಬೆಳೆದು ಸಮೃದ್ಧ ಫಲ ನೀಡಿದೆ. ಸಾಮಾಜಿಕ ವಿಮರ್ಶೆ, ರಾಜಕೀಯ ವಿಡಂಬನೆಗೆ ಅದು ವಿಶೇಷವಾಗಿ ಮೀಸಲಾದಂತಿದೆ. ಇಂದಿನ ಮಹತ್ವದ 'ಚುಟುಕು' ಕವಿಗಳಲ್ಲೊಬ್ಬರಾದ ಶ್ರೀ ದಿನಕರ ದೇಸಾಯರ ಚುಟುಕು ಹೆಚ್ಚಾಗಿ ರಾಜಕೀಯ ವಿಡಂಬನೆಯತ್ತವಾಲಿ-ದರೆ, ಇನ್ನೊಬ್ಬರಾದ ಶ್ರೀ ಅಕಬರಅಲಿ ಅವರವು ಸಾಮಾಜಿಕ ವಿಮರ್ಶೆಯತ್ತ ವಿಶೇಷ ಒಲಿದಿವೆ. ಇವರಿಬ್ಬರ 'ಚುಟುಕು' ಸಾಹಿತ್ಯದ ಸಮಾಲೋಚನೆ ಈ ಸಾಹಿತ್ಯ ಪ್ರಕಾರದ ಸಮೃದ್ಧಿ ಮತ್ತು ಸಿದ್ಧಿಯ ಮೇಲೆ ಬೆಳಕನ್ನು ಚೆಲ್ಲಬಹು-

ದಾಗಿದೆ. ಆದರೆ ದೇಸಾಯರ ಚುಟುಕು ಒಂದೆಡೆಗೆ ಸಮಗ್ರವಾಗಿ ಸಿಗುವದಿಲ್ಲ-ವಾದ್ದರಿಂದ ಅವುಗಳ ಗುಣ ವಿವೇಚನೆ, ಸ್ವಾರಸ್ಯ ನಿವೇದನೆ ಸಾಧ್ಯವಿಲ್ಲದಾಗಿದೆ. ಆದ್ದರಿಂದ ನನಗೆ ಲಭ್ಯವಿರುವ ಶ್ರೀ ಅಕಬರಅಲಿ ಅವರ ಚುಟುಕುಗಳ ಆಧಾರ-ದಿಂದಲೇ ಈ ಸಾಹಿತ್ಯದ ಪ್ರಕಾರದ ಸಿದ್ಧಿ-ಸಾಧ್ಯತೆಗಳತ್ತ ಬೆರಳುಮಾಡಿ ತೋರಿಸಿ ಅದಷ್ಟರಿಂದಲೇ ತೃಪ್ತಿಪಟ್ಟುಕೊಳ್ಳಬೇಕಾಗಿದೆ.

ಅಕಬರ ಅಲಿ ಅವರ ದೃಷ್ಟಿಯಲ್ಲಿ 'ಚುಟುಕು' ಅಂದರೆ—

"ನಮ್ಮ ನಾವೇ ನೋಡಿಕೊಳ್ಳುವ ಕನ್ನಡಿ ಹರಳು;
ಅಲ್ಲ ಸಲ್ಲದಕೆಸೆದ ಕಲ್ಲುಹರಳು;
ಅಥವ, ಕುದಿಮನದಲ್ಲಿ ಕುದ್ದು ಹೊರಗೈತಂದ
ಚಿಂತಾಮಣಿಯು—ಕಡೆದ ವಜ್ರಹರಳು!"

ಇಲ್ಲಿ ಸೂಚಿಸಿದಂತೆ 'ಕನ್ನಡಿ ಹರಳಿ'ನಂಥ 'ಚುಟುಕು'ಗಳಲ್ಲಿ ಸಮಾಜ ದರ್ಶನವಿದ್ದರೆ, 'ಕಲ್ಲುಹರಳಿ'ನಂಥ 'ಚುಟುಕು'ಗಳಲ್ಲಿ ಸಮಾಜ ವಿಮರ್ಶೆ—ವಿಡಂಬನೆ ಇದೆ. 'ಚಿಂತಾಮಣಿ'ಯಾಗಿ ಜನಿಸಿದ ಚುಟುಕುಗಳಲ್ಲಿ ಕವಿಮನ ಮಾಡಿದ ಚಿಂತನ-ಮಂಥನವಿದ್ದರೆ, 'ವಜ್ರದಹರಳಾ'ಗಿ ರೂಪುವೆತ್ತ ಚುಟುಕು-ಗಳಲ್ಲಿ ಕಾವ್ಯರಾಸಾಯನವಿದೆ. ಹೀಗೆ ಇಂದಿನ 'ಚುಟುಕು' ಒಳ್ಳೆಯ ಕಾವ್ಯದ ಮಹತ್ವದ ಒಲವು ನಿಲವುಗಳನ್ನು ಮೈಗೂಡಿಸಿಕೊಂಡು ಬೆಳೆದಿದೆ-ಬೆಳೆಯುತ್ತಿದೆ. ಅದರ ದಿಗ್ದರ್ಶನಕ್ಕಾಗಿ ಕೆಲವೊಂದು ಚುಟುಕುಗಳ ವಿವೇಚನೆಯನ್ನು ಇದಿಲ್ಲಿ ಮಾಡಲಾಗಿದೆ.

"ಕಳ್ಳಿಕೊಂಬೆಯ ಹಾಗೆ ಬಂದಳೊಬ್ಬಳುರಂಭೆ
ಆಫೀಸಿಗೇ ಅಲಂಕಾರವಾಗಿ;
ಇದ್ದು ಬಿದ್ದಂಥ ನೊರಜುಗಳೆಲ್ಲಾ ಅದಕಂಟಿ
ಬಿದ್ದಲ್ಲೆ ಬಿದ್ದಿಹವು ಸುಸ್ತು ಆಗಿ!"

ಆಫೀಸಿನಲ್ಲಿ ದುಡಿಯಲು ಹೆಣ್ಣೊಂದು ಬಂದು ಬಿಟ್ಟರೆ ಆ ಆಫೀಸಿಗೆ ಎಂಥ ದುಸ್ಥಿತಿ ಒದಗುವದೆಂಬುದರ ಚಿತ್ರ ಎಷ್ಟು ಪರಿಣಾಮಕಾರಿಯಾಗಿ ಚಿತ್ರಿತ-ವಾಗಿದೆ ಇಲ್ಲಿ. ಕಳ್ಳಿಕೊಂಬೆ-ನೊರಜು ಇವುಗಳ ಹೋಲಿಕೆ, 'ಕಳ್ಳಿ' ಪದದಲ್ಲಿಯ ಶ್ಲೇಷೆ ಅತ್ಯಂತ ಅರ್ಥಪೂರ್ಣವಾಗಿವೆ. ಅದರಂತೆ,

"ಕಚೇರಿ ಕೊಟ್ಟಗೆಯಲಿ ಕಾಲಿಟ್ಟರೆ
ಹಸುವ ಕಂಡು ಹರಿಹಾಯ್ವ ಹುಲಿ;

ಮನೆಯ ಬಾಗಿಲಲಿ ಕಾಲಿಟ್ಟೊಡನೆಯೆ
ಬೆಕ್ಕ ಕಂಡು ಬೆದರುವ ಬಡ ಇಲಿ!"

ಎಂಬಲ್ಲಿ ಅಧಿಕಾರಿಯೊಬ್ಬ ಆಫೀಸು-ಮನೆಯಲ್ಲಿ ನಡೆದುಕೊಳ್ಳುವ ರೀತಿಯ ಚಿತ್ರಣ ಕಣ್ಣಿಗೆ ಕಟ್ಟುವಂತಿದೆ.

ಮೇಲಾಧಿಕಾರಿಗಳ ದೃಷ್ಟಿಯಲ್ಲಿ ಮಾಸ್ತರನೊಬ್ಬ 'ಮಾದರಿ'ಯುವನಾಗ ಬೇಕಾದರೆ ಅವನಿಗೆ ಇರಬೇಕಾದ ಯೋಗ್ಯತೆ ಎಂಥದು ಗೊತ್ತೇ ?

"ಶಾಲೆ ಕಾಲೇಜಿನಲಿ ಕೊಂಡ ಅಕ್ಷಯಪಾತ್ರೆ
ಬಳಸಿಕೊಳ್ಳುವ ಬುದ್ಧಿ ಇದ್ದರೆ ಸರಿ;
ಕುರಿಕಾಯುವದು ಇಷ್ಟು, ಕಾರಕೂನಿಕೆ ಅಷ್ಟು
ತಿಳಿದು, ಬಾಲವ ಬಡಿಯುವನೆ ಮಾದರಿ!"

ಆತ ಶಾಲೆ-ಕಾಲೇಜಿನಲ್ಲಿ ಓದಿದ್ದೇ ಓದಿದ್ದು. ಮತ್ತೆ ಓದಬೇಕಿಲ್ಲ. ಅದನ್ನೆ 'ಅಕ್ಷಯ ಪಾತ್ರೆ'ಯಂತೆ ಬುದ್ಧಿವಂತಿಕೆಯಿಂದ ಬಳಸಿಕೊಂಡರೆ ಸಾಕು. ಅದಕ್ಕೆ ಪೂರಕವಾಗಿ ಹುಡುಗರನ್ನು ಸಂಭಾಳಿಸಿಕೊಂಡು ಹೋಗುವ, ಹಾಜರಿ-ಲೆಕ್ಕಪತ್ರಕ್ಕೆ ಸಂಬಂಧಿಸಿದ ಕಾರಕೂನಿಕೆ ಮಾಡುವ ಹಾಗೂ ಮೇಲಾಧಿಕಾರಿಗಳ ಬಾಲ ಬಡಿಯುವ 'ಸದ್ಗುಣ'ಗಳು ಅವನಲ್ಲಿರಬೇಕು! ಎಂಥ ಚುಟುಕು-ಎಂಥ ಕುಟುಕು!

ನಮ್ಮ ಶಾಲೆ-ಕಾಲೇಜಿನ ಬಹು ಸಂಖ್ಯೆ ಪಠ್ಯ ಪುಸ್ತಕಗಳು ವಿದ್ಯಾರ್ಥಿ-ಗಳಲ್ಲಿರುವ ಅಲ್ಪ-ಸ್ವಲ್ಪ ಅಭ್ಯಾಸದ ಆಸಕ್ತಿ-ವಿದ್ಯಾಪ್ರೀತಿಯ ಮೇಲೆ ತಣ್ಣೀರು ಎರಚುವಂಥವೇ ಆಗಿವೆ. ಅದರಿಂದಾಗಿ ನಮ್ಮ 'ವಿದ್ಯಾವಂತ'ನ ಗತಿ ಏನಾಗಿದೆ ನೋಡಿರಿ:-

"ವಿಜ್ಞಾನವೋ, ಕಲೆಯೊ. ಸಾಮಾಜಿಕಾಭ್ಯಾಸ
ಅಷ್ಟಿಷ್ಟು ಕಲಿತು ವಿದ್ಯಾವಂತನಾದ;
ಆಮೇಲೆ ಓದೆನಲು, ಹಾಲುಬಟ್ಟಲ ಕಂಡ
ಬೀರಬಲ್ಲನ ಬೆಕ್ಕಿನೊಲು ಬಾಲ ಮುರಿದ!"

ಈ ಚುಟುಕಿನ ರಹಸ್ಯ ಅರ್ಥವಾಗಬೇಕಾದರೆ ಬೀರಬಲ್ಲನ ಬೆಕ್ಕಿನ ಕಥೆ ನಮಗೆ ತಿಳಿದಿರಬೇಕಾಗುತ್ತದೆ. ಬೆಕ್ಕಿಗೆ ಸಾಮಾನ್ಯವಾಗಿ ಹಾಲೆಂದರೆ ಜೀವ. ಆದರೆ ಬೀರಬಲ್ ಸಾಕಿದ್ದ ಒಂದು ಬೆಕ್ಕು ಹಾಲುಕಂಡೊಡನೆ ಗಾಬರಿಗೊಂಡು

ಓಡಿಹೋಗುತ್ತಿತ್ತಂತೆ! ಏಕೆಂದರೆ ಆತ ಆದು ಸಣ್ಣದಿದ್ದಾಗ ಸುಡುಹಾಲಿನಲ್ಲಿ ಅದರ ಬಾಯಿ ಅದ್ದಿದ್ದನಂತೆ! ಇಂದು ನಮ್ಮ ಮಕ್ಕಳಿಗೂ ಅದೇ ಗತಿ ಉಂಟಾಗಿದೆ! ಯಾವು ಯಾವುವೋ ಪ್ರಭಾವಗಳ ಪರಿಣಾಮವಾಗಿ ಬಾಳಿಗೆ ಬಾರದ ಬೇಸರ ಹುಟ್ಟಿಸುವ ಪುಸ್ತಕಗಳನ್ನು ಅವರಿಂದು ಓದಬೇಕಾಗಿದೆ!! ಎಂಥ ಕಟು ಸತ್ಯ ಈ ಕಟಕಿಯ ಜೀವಾಳವಾಗಿದೆಯಿಲ್ಲ! 'ಕಾರವಾರ'ದ ಕೂಲಿ ಇತರರಂತೆ ಅಲ್ಲ! ಆತನ ಬದುಕಿನ ಬಗೆ ಅತನದೇ ಆಗಿಧೆ:

"ಒಂದಿಷ್ಟು ಕುಚ್ಚಕ್ಕಿ, ಮೇಲೆ ಬಾಂಗಡಾ ಮೀನು
ಕೊನೆಗಷ್ಟು ಕುಡಿಯೆ ದೊರೆಯಿತೊ ಈತ ಅರಸ;
ನಾಳೆ ಚಿಂತೆಯ ಕಟ್ಟಿಕೊಂಡು ಕೂಲಿಯು ಮಾಡ;
ಇವನು ಉಮರಖಯ್ಯಾಮನಾ ಪಟ್ಟ ಶಿಷ್ಯ!"

'ಮದುವೆ' ಗಂಡು-ಹೆಣ್ಣಿನ ಜೀವನದಲ್ಲಿ ಎಂಥ ಸ್ಥಿತ್ಯಂತರಗಳನ್ನು ಸಾಮಾನ್ಯವಾಗಿ ತರುತ್ತದೆ-ಎಂಬುದರ ಬಣ್ಣನೆಯೊಂದು ಕಣ್ಸೆಳೆಯುವಂತಿದೆ:

"ಮದುವೆಯಾಗುವ ಮುಂಚೆ ಉಗ್ರನರಸಿಂಹನಿವ,
ಇವಳೊ ಮುಟ್ಟಲು ಮುರುಕಿಯಂಥ ಜೀವಿ;
ಮದುವೆ ಬಿಸಿ ಆರಿ, ಮಕ್ಕಳ ಭಾರ ಬಿದ್ದಿತೋ
ಇವನು ಮೆತ್ತಗೆ, ಇವಳೊ ರಣಭೈರವಿ!"

ಈ ರೀತಿಯಾಗಿ ಅಕಬರ ಅಲಿಯವರ ಈ ಮೇಲಿನ ಚುಟುಕುಗಳಲ್ಲಿ ಸಮಾಜ ಜೀವನದ ವಿವಿಧ ಮುಖಗಳು ಪಡಿಮೂಡಿವೆ. ಅಲ್ಲಿ ಆಯಾ ಮುಖಗಳ ಓರೆ-ಕೋರೆ, ಒಗರು-ಹೊಗರು ಸಹಜ ಸುಂದರವಾಗಿ ಬೆಳಗಿವೆ.

"ಮದುವೆಯಾದವಗೆ ಏನೆನಬೇಕೆನೆ
ಎಳಕನೆಂದೆನ್ನೈ: 'ಚತುರ್ಭುಜ!'
ಅದನು ಸಹಿಸದೆಯೆ ಕೊಳಕನೆಂದನ್ನೈ:
'ಚತುಷ್ಪಾದನೆಂದರೆ ಸಾಜ!"

(ಮದುವೆಯಾದವ)

* * * *

"ಮದುವೆಯಾಗುವ ಮುಂಚೆ ಏನಿವನ ಜಡಿವಾರ?
ಕಾಯ್ಸುಲ್ಯೆ ಕೋಡೊಯ್ಕುಲೂ ಮಾನ ಸಲದು;

ಮದುವೆಯಾಗುವದೆ ತಡ, ಕಸಬರಿಗೆ-ಕಾಲುಮರಿ
ಏನೆಲ್ಲ ಹೊತ್ತೊಯ್ಯಲಿಕು ಸಿದ್ಧ, ಲಡದು!"

(ಕಲಿತ ಕುಮಾರ)

*   *   *   *

"'ಏನು ಗುರುಗಳ ಮಾತು!-ಗಂಗಾವತರಣದೊಲು
ಧಾರೆ ಅವಿರತ' ಎಂದು ಹೊಗಳಿದನು ಗಣಪ;
'ಉಗುಳು-ಭಾಗೀರಥಿಯ' ಅಭಿಷೇಕವಾಯ್ತೇನೊ!'-
ಎಂದು ಗಹಗಹಿಸಿದನು ಒಬ್ಬ ಟೊಣಪ!"

*   *   *   *

"ನೆಲವನೊದ್ದು ನೀರು ತೆಗೆಯು-
ತಿದ್ದೆ ನಿಮ್ಮ ವಯದೊಳು'-
ಎಂದು ಡ್ರಿಲ್ಲು ಮಾಸ್ತರೆನಲು
ಜಂಬತನವ ಕೊಚ್ಚಲು,
ತುಂಟನುಡಿದನಾಗಳೆ:
'ಕಣ್ಣಲೇನ್ರಿ, ಗುರುಗಳೆ'"

ಈ ಚುಟುಕು ತಮ್ಮ ಪ್ರಾಸಾದಿಕ ಗುಣದಿಂದಾಗಿ ಸ್ವಯಂಸ್ಪಷ್ಟವಾಗಿವೆ. ಇವುಗಳಲ್ಲಿಯು ಸಾಮಾಜಿಕ ನೋಟಗಳು ಲಲಿತ ಹಾಸ್ಯದಿಂದಾಗಿ ಮೃದು ಮಧುರವಾಗಿವೆ.

"ಮೂರು ದಿನಗಳಿಗೊಬ್ಬ ಮಂತ್ರಿಭೇಟಿಯು ಅಬ್ಬ!
ಸಂಭ್ರಮದ ಸ್ವಾಗತಕೆ ಬಂತು ಚಕ್ರ;
ಹೇಳಿದ್ದೆ ಹೇಳುವಾ ಕಿಸಬಾಯಿ-ದಾಸ-ಕತೆ
ಕೇಳಿ ಜನಮನವಾಯ್ತು ತುಂಬ ವ್ಯಗ್ರ!"

(ಮಂತ್ರಿಭೇಟಿ)

*   *   *   *

"ಕದ್ದು ಸೇದುವ ಮಗಗೆ ಬುದ್ಧಿ ಹೇಳುವ ತಂದೆ
ತಾ ಮಾತ್ರ ಬಿಡಲಿಲ್ಲ ತನ್ನ ಚಟವ;

ಮದ್ಯ ಸೇವಿಸದೇನೆ ನಿದ್ದೆ ಹೋಗದ ದೇಹ
ಮದ್ಯಪಾನವ ತಡೆಯೆ ಹಿಡಿದ ಹಟವ!"

(ಚಟ-ಹಟ)

* * * *

"ರಾಜಕಾರಣಿಯು ನಡೆದ ದಾರಿ ಕಥೆ,
ರಜತಾಕ್ಷರದಲ್ಲಿ ನಿಕ್ಷಿಪ್ತ!'—
ಎಂದು ಹೊಗಳಿದಗೆ, ಕೊಳಕನೆಂದನೈ:
'ಸಿಂಬಳ ಹುಳದೊಲು ವಿಕ್ಷಿಪ್ತ'!"

(ರಾಜಕಾರಣಿಯ ದಾರಿ)

ಎಂಬಲ್ಲಿಯ ರಾಜಕೀಯ ಜೀವನ ವಿಡಂಬನೆ ಮರ್ಮಭೇದಕ-ವಾಗಿದೆ!

"ಹುಚ್ಚು ಮುಂಡೆಯು ತನ್ನ ಕೂಸ ಕಂಕುಳಲಿಟ್ಟು
ಹುಡುಕಿಯೇ ಹುಡುಕಿದೊಲು ಊರಲೆಲ್ಲ,
ನಮ್ಮ ಸರಕಾರ ಭ್ರಷ್ಟಾಚಾರ ಶೋಧನೆಗೆ
ತೊಡಗಿಹುದು ಎಬ್ಬಿಸುತ ಗೌಜುಗಿಲ್ಲ!"

(ಭ್ರಷ್ಟಾಚಾರ)

"ಹೆಂಡತಿಯು ಹೊಡೆಯುತ್ತಿದ್ದರು ತಾನೆ ಹೊಡೆದಂತೆ
ಗೌಜು–ಗದ್ದಲ ಮಾಡಿ ಗಂಡನೊಬ್ಬ
ಮಾನ ಮುಚ್ಚಿಕೊಳ್ಳುವೊಲು ವರ್ತಿಸಿದೆ ಸರಕಾರ
ವ್ಯಾಪಾರಿ ಹೊಡೆತಕ್ಕೊಳಗಾಗಿ ಅಬ್ಬ!"

(ವ್ಯಾಪಾರಿ ಮತ್ತು ಸರಕಾರ)

* * * *

"ಅಯ್ಕಟ್ಟಿನ ಸ್ಥಳದಲ್ಲಿ ನಿಲುವನಿವ
ತಪೋನಿಷ್ಠ ಋಷಿ ತಾನಾಗಿ,
ಕಳ್ಳ ಕದೀಮರ ಕ್ಷಮಿಸಿ ಬಿಡುವನಹ
'ಪೀಸಿ' ದೊರೆತ ಖುಷಿಯಲಿ ಬೇಗಿ!"

(ಪೋಲೀಸ ಪಹರೆ)

ಈ ಚುಟುಕು ಸರಕಾರೀ ನ್ಯೂನತೆಗಳ ಮೇಲೆ 'ಕ್ಷ' ಕಿರಣ ಚೆಲ್ಲುವ-
ದರ ಜತೆಗೇ ಭ್ರಷ್ಟಾಚಾರದ ನಿಜ ಬಣ್ಣವನ್ನು ಪರಿಣಾಮಕಾರಿಯಾಗಿ ಹೊರ-
ಗೆಡಹುತ್ತವೆ.

'ಇನ್ನಾವ ಬಂಡವಲು ಇಲ್ಲದಿರುವಾಗ ಈ
ಮೂಬೆರಿಕೆ-ಜಾತಿ-ಕೋತಿಯ ಕಂಡನು;
'ನಿಮ್ಮ ಕುಲದವನೆ ನಾ' ನೆನುತದನು ಹಿಡಕೊಂಡು
ಕುಣಿಸಿ, ಚಪ್ಪಾಳೆ ಹೊಡೆಯಿಸಿಕೊಂಡನು!"

(ಮಂಗಾಡಿಗ)

*                *                *                *

"ಊರು ಸುಟ್ಟರು ಹೊರಗೆ. ಆದರೂ ಊರೊಳಗೆ
ಇದ್ದು ಮೆರೆಯುವ ನಮ್ಮ ಊರ ಹನುಮಪ್ಪ;
ಏನಾದರೆನಕೊಳ್ಳಿ, ಹಳ್ಳಿಗಿವನೇ ಕೊಳ್ಳಿ!
ರಾಜಕೀಯದಲಂತು ಚಾಣಕ್ಯನಪ್ಪ!"

(ಹಳ್ಳಿಯ ಮಾಸ್ತರು)

*                *                *                *

"ಹಬ್ಬ ಬಂದಾಗೊಮ್ಮೆ ಉಬ್ಬಿದ ಬಲೂನು ಇವ;
ರಾಜಕೀಯದಲಿ ಮುಗಿಲಿಗೆ ಏರುವ!
ಹಬ್ಬದಮಲಿಳಿದೊಡನೆ ಮತ್ತೆ ನೆಲಕೇ ಬಿದ್ದು
ಹರಕನೊಲು ಕೆರಕೊಳ್ಳುತಿದ್ದು ಬಿಡುವ!"

(ಸಾಹೇಬನ ಹಬ್ಬ)

*                *                *                *

"ಮುಂದೆ ನಡೆದರೆ ಸಾಬ, ಹಿಂದೆ ಹೊರಟಳು ಬೀಬಿ,
ಕರಿ ಬುರುಕಿಯಲಿ ಮುಚ್ಚಿ ತನ್ನ ದೇಹ;
ಚೇಳು ಕೊಂಡೆಯ ಹೊಡೆತದಂತೆ ಕೊಳಕನು ನುಡಿದ:
'ಕರಡಿ ಆಡಿಸುವವನು ಬಂದನಾಹ!"

(ಸಾಹೇಬ-ಬೀಬಿ)

*                *                *                *

" 'ಆ ಜಲಧಿಯನೆ ಜಿಗಿದ,
ಏನೆಮ್ಮ ಹನುಮ!'
'ಜಿಗಿಯಲಾರೆ ಗಟಾರು
ಏನೊ ನಿನ ಜನುಮ!' "

(ಗತವೈಭವ)

ಈ ಚುಟುಕು ಸಮಾಜದ ವಿವಿಧ ವ್ಯಕ್ತಿಗಳ ರೀತಿ-ನೀತಿಗಳನ್ನು ಚೇಳು ಕೊಂಡಿಯಂತೆ ಕುಟುಕಿ ಎಚ್ಚರಿಸುತ್ತವೆ.

"ಸೆಗಣಿಯ ಉಂಡಿ, ದೂಕಿತು ಕುಂಡಿ
ಕುಂಟುತ ಹೊಂಟಿತು ಹೇಸಿ ಹುಳ:
ಮುಂದಕ ಮಾರಿ, ಹಿಂಬುರಕೀ ಗುರಿ!
ಇದು ಸನಾತನದ ಬ್ಯಾಸಿಯಲ!"

(ಹುಳ)

ಇದೊಂದು ಕಿರಿದರಲ್ಲಿ ಹಿರಿದಾದ ಆಶಯವನ್ನು ಅಭಿವ್ಯಕ್ತಗೊಳಿಸುವ ಪ್ರತಿಮೆಯಾಗಿದೆ; ಕವಿಹೃದಯದಿಂದ ಒಡಮೂಡಿದ 'ಚಿಂತಾಮಣಿ'ಯಾಗಿದೆ!

"ಮೊದಲ ಮಳೆ ಮುತ್ತಿಡಲು ಮೈಜುಮ್ಮುಗೊಂಡಿತಿಳೆ
ಮಧುರಭಾವದಪೂರ್ವ ಮೀಸಲು-ಬಗೆ
ಮಂದಗಿನ ಹಾಲಿನಲಿ ಕೇಶರವ ಬೆರಸಿದೊಲು
ನುಗ್ಗಿಹೂವಿನ-ಹಿಗ್ಗು-ಸೂಸಲು ನಗೆ!

(ಪುಷ್ಪವತಿ)

ಕಾವ್ಯಾನುಭವವೊಂದು ಕೆನೆಗಟ್ಟಿ ನಿಂತ ಅಪೂರ್ವ ರಸಚಿತ್ರ ಈ ಚುಟುಕಿನಲ್ಲಿದೆ. ಮೊದಲ ಮಳೆಯ ಮುತ್ತಿನಿಂದ ಭೂಮಿಯ ಮೈ ಪುಲಕಿತ-ವಾಗಿ, ಅದರ ಮೀಸಲು-ಮನದಲ್ಲಿ ಅಪೂರ್ವ ಮಧುರಭಾವ ಉಕ್ಕಿ, ಮಂದಗಿನ ಹಾಲಿನಲಿ ಕೇಶರವ ಬೆರೆಸಿದಂಥ ನುಗ್ಗಿಹೂವಿನ ಹಿಗ್ಗಾಗಿ-ಕೊಬ್ಬರಿಯ ಸೂಸಲಿ-ನಂಥ ನಗೆಯಾಗಿ ಹೊರ ಹೊಮ್ಮಿತು! ಭೂಮಿ 'ಪುಷ್ಪವತಿ'ಯಾದುದರ ವರ್ಣನೆ ಅಪೂರ್ವವಾಗಿದೆ ಇಲ್ಲಿ; ಏಕೆಂದರೆ ಗಂಧ, ರಸ, ರಂಗಸ್ಪರ್ಶ—ಈ ಸಂವೇದನೆ-ಗಳ ಮುಖಾಂತರ 'ಋತುಮತಿ'ಯ ಸೌಂದರ್ಯವೂ ಇಲ್ಲಿ ಸೊಗಸಾಗಿ ಆವಿರ್ಭ-ವಿಸಿದೆ!

ಹೀಗೆ ಇಂದಿನ ಚುಟುಕು ವಿನೋದ, ವಿಮರ್ಶೆ-ವಿಡಂಬನೆಗಳಿಗೆ ಮಾತ್ರವಲ್ಲ, ಗಂಭೀರವಾದ ಚಿಂತನೆ, ಸೌಂದರ್ಯಾನುಭವಗಳಿಗೂ ವಾಹಕವಾಗಿ ಪರಿಣಮಿಸಿದೆ. ಶ್ರೀ ದಿನಕರ ದೇಸಾಯಿ, ಶ್ರೀ ಅಕಬರಅಲಿ ಮಾತ್ರವಲ್ಲ ಇನ್ನೂ ಅನೇಕ ಹಿರಿ-ಕಿರಿಯ ಕವಿಗಳೂ ಈ ಕಾವ್ಯಕ್ಷೇತ್ರಕ್ಕೆ ಆಕರ್ಷಿತರಾಗಿ ಪ್ರಯೋಗ ಮಾಡಿದ್ದಾರೆ. ಅವರಲ್ಲಿ ಸರ್ವಶ್ರೀ ಚೆನ್ನವೀರ ಕಣವಿ, ದೇವಾನಾಂಪ್ರಿಯ, ಜಿ. ಎಸ್. ಅನ್ನಧಾನಿ, ಶ್ರೀ ಜಿ. ಎಸ್. ಅವಧಾನಿ, ಶ್ರೀನಿವಾಸ ಶೆಟ್ಟಿ, ಶ್ಯಾಮಹುದ್ದಾರ, ನಾರಾಯಣ ಕಾಗಾಲ, ಶಂ. ಗು. ಬಿರಾದಾರ, ಭಾಲಚಂದ್ರ ಘಾಣೇಕರ, ಇವರೆಮೊದಲಾದವರನ್ನು ಹೆಸರಿಸಬಹುದಾಗಿದೆ. ಒಟ್ಟಾರೆ ಇದೊಂದು ಮಹತ್ವದ ಸಾಹಿತ್ಯ ಪ್ರಕಾರವಾಗಿ ಬೆಳೆಯುತ್ತಿದೆ. ವಿಮರ್ಶಕರ ಗಮನವನ್ನು ಸೆಳೆಯುತ್ತಿದೆ ಎಂದು ಹೇಳಬಹುದಾಗಿದೆ.



೧೯೭೧.

# ನವ್ಯ ಕಾವ್ಯದ ಧಾಟಿ-ಧೋರಣೆ

ಸಾಹಿತ್ಯಲೋಕದಲ್ಲಿ ಕಾಲಮಾನ-ಪರಿಸ್ಥಿತಿಗೆ ಅನುಗುಣವಾಗಿ ಹೊಸ ಹೊಸ ಆವಿಷ್ಕಾರಗಳು ಆಗುವದುಂಟು. ಕನ್ನಡ ಸಾಹಿತ್ಯವೂ ಅದಕ್ಕೆ ಅಪವಾದ ವಾಗಿಲ್ಲ. ಹಳೆಗನ್ನಡದ ಚಂಪೂ; ನಡುಗನ್ನಡದ ವಚನ, ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ, ಕೀರ್ತನೆ ಇತ್ಯಾದಿಗಳು; ಆಧುನಿಕ ಕಾಲದ ಭಾವಗೀತೆ-ಈ ವಿಧದ ಕಾವ್ಯರೂಪಗಳೇ ಅದಕ್ಕೆ ಸಾಕ್ಷಿ. ಈ ಬಗೆಯಾಗಿಯೇ ಇಂದು ನಮ್ಮಲ್ಲಿ 'ನವ್ಯಕಾವ್ಯ' ತಲೆದೋರಿದೆ, ಎಂಬುದನ್ನು ನಾವು ಮರೆಯುವಂತಿಲ್ಲ.

'ಹೊಸತು' ಯಾವ ಕಾಲದಲ್ಲಿ ಕಾಣಿಸಿಕೊಂಡರೂ 'ಹಳತು' ಅದನ್ನು ಸಾಮಾನ್ಯವಾಗಿ ಪ್ರಶ್ನಿಸುತ್ತದೆ, ಪ್ರತಿರೋಧಿಸುತ್ತದೆ. ನವೋದಯದ ಆರಂಭ ಕಾಲದಲ್ಲಿಯೂ ಹಾಗೆ ಆದುದುಂಟು. ಹಳೆಯ ಛಂದಸ್ಸು, ಅಲಂಕಾರಾದಿಗಳ ಮಾರ್ಗ ಬಿಟ್ಟು, ಹೊಸದಾರಿ ತುಳಿಯತೊಡಗಿದಾಗ ಬೇಂದ್ರೆಯಂಥವರೂ ಟೀಕೆಗೆ ಗುರಿಯಾದುದುಂಟು. ಆದರೂ ಕಾಲಧರ್ಮಕ್ಕನುಸಾರವಾಗಿ, ಪ್ರತಿಭಾಸ್ವಿತರ ಉಳುಮೆಯಿಂದಾಗಿ 'ಭಾವಗೀತೆ' ಬೇರೂರಿ, ಸಮೃದ್ಧವಾದ ಬೆಳೆಯನ್ನು ನೀಡಿ, ಕನ್ನಡ ಸಾಹಿತ್ಯದ ಸಂಪತ್ತನ್ನು ಹೆಚ್ಚಿಸಿದ್ದುಂಟು. ಹೀಗಿರುವಾಗ 'ಹೊಸತು'-'ಹೊರಗಿನಿಂದ ಬಂದದ್ದು' ಎಂಬ ಯಾವ ಯಾವುವೋ ಕಾರಣಗಳಿಗಾಗಿ 'ನವ್ಯ ಕಾವ್ಯ'ವನ್ನು ಅರ್ಥಮಾಡಿಕೊಳ್ಳದೆ ವಿರೋಧಿಸುವಲ್ಲಿ ಅರ್ಥವಿಲ್ಲ. ಒಳ್ಳೆಯದಾದುದು, ಹುರುಳುಳ್ಳದ್ದು, ಸತ್ವಪೂರ್ಣವಾದದ್ದು ಉಳಿದೇ ಉಳಿಯುತ್ತದೆ. ಹಾಗಿಲ್ಲದುದು, ತಂತಾನೆಯೇ ಅಳಿಯುತ್ತದೆ. ಈಗಾಗಲೇ ಅದು ಹಿರಿಕಿರಿಯ ಅನೇಕ ಕವಿಗಳನ್ನು ಒಂದಿಲ್ಲೊಂದು ವಿಧದಲ್ಲಿ ಆಕರ್ಷಿಸಿದೆ; ನೆಲೆಯೂರಿ ನಿಂತು, ಬಲ ವಾಗಿ ಬೆಳೆಯುತ್ತಿದೆ. ಇಂಥ ಸಂದರ್ಭದಲ್ಲಿ ಅದರ ಧಾಟಿ-ಧೋರಣೆಗಳನ್ನು ಅರಿ-ತುಕೊಳ್ಳುವದು ಅಗತ್ಯವಾಗಿದೆ. ಅದರಿಂದ ಅದರ ಆಸ್ವಾದ-ಅಭ್ಯಾಸಕ್ಕೆ ಅನು ಕೂಲವಾಗಬಹುದಾಗಿದೆ.

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸ್ವಾತಂತ್ರ್ಯ-ಪೂರ್ವದ ಹೋರಾಟದ ಕಾವು ಆರಿ ಹೋಯಿತು, ಆದರ್ಶದ ಹಂಬಲ ಹುಡಿಗೂಡಿತು. ತೀವ್ರವಾದ

ವಾಸ್ತವಿಕ ಪ್ರಜ್ಞೆ ಒಡಮೂಡಿತು. ಇದರ ಫಲವಾಗಿ ಸಂಪ್ರದಾಯದ ಶ್ರದ್ಧೆ, ಮೌಲ್ಯಗಳಲ್ಲಿ ಅಪನಂಬಿಕೆಯುಂಟಾಯಿತು. ಯಾವುದನ್ನೂ ಶಂಕಿಸುವ ಸಡ್ಡು ಹೊಡೆದು ಕುಸ್ತಿಗೆ ಕರೆವ, ಬಂಡುಗಾರ ಮನೋಭಾವ ಬೆಳೆಯ ಹತ್ತಿತು. ಇಂಥ ಸಮಯದಲ್ಲಿ ಪಾಶ್ಚಾತ್ಯ ಹೊಸ ಕಾವ್ಯದ ಪ್ರೇರಣೆಯಿಂದಲೊ, ಆಧುನಿಕ ಜೀವನ-ದ ಅನಂತ ಮುಖಗಳನ್ನು ಯಥಾವತ್ತಾಗಿ ಚಿತ್ರಿಸುವ ಹಂಬಲದಿಂದಲೊ, ಭಾವ-ಗೀತೆಯ ಯುಗ ಕೊನೆಗಂಡಂತೆನಿಸಿ ಹೊಸತನದ ಅನಿವಾರ್ಯ ಅವಶ್ಯಕತೆ ಉಂಟಾದುದರಿಂದಲೊ, ಪ್ರಯೋಗಪ್ರಿಯತೆಗಾಗಿಯೊ—ಅಂತೂ ಯಾವುದೊ ಕಾರಣಕ್ಕಾಗಿ 'ನವ್ಯಕಾವ್ಯ'ದ ಪ್ರಯೋಗ ಕನ್ನಡದಲ್ಲಿ ಪ್ರಾರಂಭವಾಯಿತು. ಡಾ. ವಿ. ಕೆ. ಗೋಕಾಕರು ೧೯೫೦ರಲ್ಲಿ ಮುಂಬಯಿ ಕನ್ನಡ ಸಾಹಿತ್ಯ ಸಮ್ಮೇ-ಲನದ ಅಂಗವಾಗಿ ಜರುಗಿದ ವಿಮರ್ಶಾಗೋಷ್ಠಿಯ ಅಧ್ಯಕ್ಷ ಸ್ಥಾನದಿಂದ ಈ ಬಗೆಯ ನೂತನ ಕಾವ್ಯ ಪ್ರಯೋಗದ ಅವಶ್ಯಕತೆಯನ್ನು ಒತ್ತಿಹೇಳಿ, ಅದಕ್ಕೆ 'ನವ್ಯಕಾವ್ಯ' ವೆಂದು ನಾಮಕರಣಮಾಡಿ ನಾಂದಿ ಹಾಡಿದರು. ಸರಿಸುಮಾರು ಅದೇ ಕಾಲಕ್ಕೆ ಶ್ರೀ ಎಂ. ಗೋಪಾಲಕೃಷ್ಣ ಅಡಿಗರು 'ಹಿಮಗಿರಿಯ ಕಂದರ' ಕೃತಿರಚನೆಯೊಡನೆ 'ನವ್ಯಕಾವ್ಯ' ಪ್ರಯೋಗ ಪ್ರಭಾವಶಾಲಿಯಾಗುವಂತೆ ಮಾಡಿ-ದರು. ಹೀಗೆ ಸುರುವಾದ ಈ ಸಾಹಿತ್ಯ ಪ್ರಕಾರ ಇದೀಗ ಬೇರುಬಿಟ್ಟು ಗಟ್ಟಿ-ಯಾಗಿ ನಿಲ್ಲುವಂತೆ ತೋರುತ್ತಿದೆ. ಅದರ ಆರಂಭದ ಅಬ್ಬರ, ಅದಕ್ಕೆ ಉಂಟಾದ ಕಾರುಡು ವಿರೋಧ—ಎರಡೂ ಕಡಿಮೆಯಾಗಿ, ಕದಡು ತಿಳಿಯಾಗುತ್ತಿದೆ. ಇದು ಎಲ್ಲ ದೃಷ್ಟಿಯಿಂದಲೂ ಆರೋಗ್ಯಕರವಾದ ವಾತಾವರಣವೇ ಆಗಿದೆ.

೩

ಕಾವ್ಯದ ಮುಖ್ಯ ಕೆಲಸ ಅನುಭವಕ್ಕೆ ಆಕಾರ ಕೊಡುವದು, ಆಶಯಕ್ಕೆ ಅಭಿವ್ಯಕ್ತಿ ನೀಡುವದು. ಸಮರ್ಥವಾದ ಸಾರ್ಥಕವಾದ ಶಬ್ದಮಾಧ್ಯಮಕ್ಕೆ ಶರಣು ಹೋದಾಗಲೇ ಇದು ಸಾಧ್ಯವಾಗುತ್ತದೆ. ಬಳಸಿ ಬಳಸಿ ಸವಕಲು ನಾಣ್ಯವಾದ ಮಾತು, ಹಳಸಿ ಹೇಸಿಗೆ ಹುಟ್ಟಿಸುವ ಉಪಮೆ-ರೂಪಕಾದಿಗಳನ್ನು ತ್ಯಜಿಸಿ, ದಿನಬಳಕೆಯ ಶಕ್ತಿಸಂಪನ್ನ ನುಡಿ-ನುಡಿಕಟ್ಟು, ಉಪಮೆ ರೂಪಕಾದಿಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ತನ್ಮೂಲಕ ಕಾವ್ಯದ 'ನವನವೋನ್ಮೇಷಶಾಲಿನೀ' ಗುಣವನ್ನು ಸಂರಕ್ಷಿಸಲು ಶ್ರಮಿಸಬೇಕಾಗುತ್ತದೆ. ಕಾವ್ಯದ ಜೀವಂತಿಕೆಯನ್ನು ಕಾಯ್ದುಕೊಳ್ಳಬೇಕಾಗುತ್ತದೆ. ಇದನ್ನರಿತ, ಇದೂ ಒಂದು ಆದರ್ಶವೆಂದು ಬಗೆದ ನವ್ಯಕವಿ ಹೊಸ ಜಗತ್ತಿನ ಹೊಸಹೊಸ ಅನುಭವಗಳಿಗೆ ಸಂಬಂಧಿಸಿದ ಬಿಸಿ ಬಿಸಿ ಮಾತು, ಉಪಮೆ, ರೂಪಕಾದಿಗಳನ್ನು ಬಳಸತೊಡಗಿದ್ದಾನೆ.

ಕವಿ ಗೋಪಾಲ ಕೃಷ್ಣ ಅಡಿಗರ 'ಪ್ರಾರ್ಥನೆ' ಕವನದ ಮೊದಲ ಕೆಲ-ಸಾಲು ಈ ದೃಷ್ಟಿಯಿಂದಲೂ, ನವ್ಯಕಾವ್ಯದ ಒಟ್ಟು ಧಾಟಿ-ಧೋರಣೆಯ ದೃಷ್ಟಿಯಿಂದಲೂ ಗಮನಾರ್ಹವಾಗಿವೆ:

"ಪ್ರಭೊ,
ಪರಾಕುಪಂಪನ್ನೊತ್ತಿಯೊತ್ತಿ ನಡಬಗ್ಗಿರುವ,
ಬೊಗಳು ಸನ್ನಿಯು ಹೊಗಳು ಭಟ್ಟ ಖಂಡಿತ ಅಲ್ಲ;
ಬಾಲವಾಡಿಸಿ ಹೊಸೆದು ಹೊಟ್ಟೆ ಡೊಗ್ಗು ಸಲಾಮು
ಬಗ್ಗಿ ಮಿಡುಕುವ ಸಂಧಿವಾತ ಪೀಡಿತನಲ್ಲ"....

ಈ ಪದ್ಯ ಪಂಕ್ತಿಗಳಲ್ಲಿಯ ಒಟ್ಟು ಧಾಟಿ-ಧೋರಣೆ ಆಧುನಿಕ ಮಾನವನ ಒಲವು-ನಿಲವುಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ಹಿಂದಿನ ಭಕ್ತಾದಿಗಳ ಡಾಂಭಿಕತನವನ್ನೂ ದಾಸ-ಮನೋವೃತ್ತಿಯನ್ನೂ ಕಂಡ ಕವಿಯ ಮನಸ್ಸು ರೋಸಿ ಹೋಗಿದೆ, ರೊಚ್ಚಿ ಗೆದ್ದಿದೆ. ಅವರ 'ಪರಾಕು'ಗಳು—ಸ್ತುತಿ ಸ್ತೋತ್ರಗಳು-ಕೇವಲ ಯಾಂತ್ರಿಕವಾಗಿವೆ; ಪಂಪನ್ನೊತ್ತಿ ಗಾಳಿ ತುಂಬುವ ಕ್ರಿಯೆಗಳಾಗಿವೆ! ಅವುಗಳಲ್ಲಿ ಭಕ್ತಿ-ಶ್ರದ್ಧೆಯ ಸೋಂಕು ಇಲ್ಲ. ಪಂಪನ್ನೊತ್ತುವಾಗಿನ 'ನಡಬಗ್ಗುವಿಕೆ'ಯಂತೆಯೇ. ಅವರ ನಮಸ್ಕಾರಾದಿಗಳು ಯಾಂತ್ರಿಕವಾಗಿವೆ; ಸ್ವಾಭಿಮಾನ ಶೂನ್ಯತೆಯ ದ್ಯೋತಕವಾಗಿದೆ! ಇದೇ ರೀತಿಯಾಗಿ 'ಹೊಗಳು ಭಟ್ಟ'ನ ಬೊಗಳು-ಸನ್ನಿ ಹಾಗು 'ಡೊಗ್ಗು ಸಲಾಮು' ಹಾಕಲೆಂದು ಬಗ್ಗಿ ಬಗ್ಗಿ ಸಂಧಿವಾತ ಪೀಡೆಗೊಳಗಾಗುವಿಕೆ—ಈ ಪದಪ್ರಯೋಗಗಳಲ್ಲಿಯ ಅರ್ಥವಂತಿಕೆ ಮನಸ್ಸಿನಲ್ಲಿ ನಾಟಿ ನಿಲ್ಲುವಂಥದಾಗಿದೆ.

ಕವಿ ಕೆ. ಎಸ್. ನಿಸಾರ್ ಅಹಮದ್ ಅವರ 'ನೆನಪು' ಕವನದಲ್ಲಿಯ 'ವಿಫಲಪ್ರೇಮ'ದಿಂದಾದ ಪರಿಣಾಮದ ಚಿತ್ರಣ ಅನನ್ಯಸಾಧಾರಣವಾಗಿದೆ:

"ಹಳೆಯ ಗಾಯಗಳೆಲ್ಲ ಕಾಲವೈದ್ಯನ ಕುಶಲ
ಕರ್ಮದಿಂದೊಂದೊಂದೆ ಮಾಯ್ದು. ಗರಿಗಳು ಬಿದ್ದ
ತೆಂಗಿನಂತೆದೆಯುದ್ದ ಗುರುತುಗಳು ಒತ್ತಿಹವು,
ಹಿಂದಿನಪಘಾತಕ್ಕೆ ಎಚ್ಚರಿಕೆ ಕೆತ್ತಿಹವು"

(ಸುಮುಹೂರ್ತ)

'ವಿಫಲ ಪ್ರೇಮದ' ಹಳೆಯ ಗಾಯಗಳೆಲ್ಲ ಮಾಯ್ದರೂ ಅವುಗಳ ಕಲೆಗಳು ಎದೆಯಲ್ಲಿ ಉಳಿದುಬಿಟ್ಟು, ಆಗಾಗ ಹಳೆಯ ಗಾಯದ ನೆನಪು ತರುತ್ತವೆ, ಆ ಬಗ್ಗೆ ಎಚ್ಚರಿಕೆ ಕೊಡುತ್ತವೆ—ಎಂಬ ಆಶಯದ ಅಭಿವ್ಯಕ್ತಿಗಾಗಿ ಕವಿ ಬಳಸಿದ 'ಗರಿಗಳು ಬಿದ್ದ ಗುರುತುಳಿದ ತೆಂಗಿ'ನ ಉಪಮೆ ಹೊಚ್ಚ ಹೊಸದಾಗಿದೆ, ಅರ್ಥಭಾರದಿಂದ ಬಳುಕುತ್ತಿದೆ. ಅವರು ಇನ್ನೊಂದೆಡೆಗೆ 'ಮಡಿವಂತನ' ಚಿತ್ರಣಕ್ಕೆ ಬಳಸಿದ ದಿನ ಬಳಕೆಯ ಭಾಷೆ-ರೂಪಕಗಳು ಸತ್ವಪೂರ್ಣವೂ ಸ್ವಾರಸ್ಯಪೂರ್ಣವೂ ಆಗಿವೆ;

"ನೇಮ ನಿಷ್ಠೆಯ ಮಗ್ಗದವಿರಾಮ ಕರ್ಮದಲಿ
ನಂಬಿಕೆಯ ನೂಲಿನೆಳೆಯೊಂದೊಂದೆ ಹೊಸೆ ಹೊಸೆದು
ಆಹ, ಮೋಕ್ಷದ ಬಟ್ಟೆ! ಥಾನುಗಟ್ಟಲೆ ಮಾರಿ ನಮ್ಮ ಮಡಿವಂತ
ಕಟ್ಟಿರುವ ದಿನದಿನವು ನೆಲದಬಾಕಿ: ಹೊಟ್ಟೆ ಪಾಡಿನ ಕಂತ."

(ಸುಮುಹೂರ್ತ)

ಕವಿ ಚೆನ್ನವೀರ ಕಣವಿಯವರು ನವೋದಯ ಹಾಗು ನವ್ಯಕಾವ್ಯದ ಸಮನ್ವಯವಾದಿಗಳಾಗಿದ್ದಾರೆಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಅದಕ್ಕೆ ಒಂದು ಒಳ್ಳೆಯ ಉದಾಹರಣೆ ಇಲ್ಲಿದೆ:

"ಮಾವು ಹೂವಿನ ಕೊಡೆವಿಮಾನದಿಂದಿಳಿತಂದು
ಬಂದ ಪ್ರೀತಿಯ ಕಂದ... .... .... ... ... ...."

('ಋತು ಸಂಸಾರ,' ದೀಪಧಾರಿ)

ವಸಂತ ಮಾಸದ ವರ್ಣನೆಯ ಪ್ರಸಂಗ ಬಂದಾಗಲೆಲ್ಲಾ ಹೂಬಿಟ್ಟ ಮಾಮರವನ್ನು ಬಣ್ಣಿಸುವದು ಪರಂಪರೆಯ ಪದ್ಧತಿ. ಅಷ್ಟರಮಟ್ಟಿಗೆ ಇಲ್ಲಿ ಪರಂಪರೆಯ ಬೇರುಗಳು ಇವೆ. ಆದರೆ ಆ 'ವಸಂತ ಮಾಸ'ವನ್ನು 'ಋತುಸಂಸಾರ'ಕ್ಕೆ ಸೇರಿದ 'ಕಾಲೇಜು ಕುಮಾರ'ನೆಂದೂ ಆತ ಹೂತ ಮಾಮರದ 'ಕೊಡೆ-ವಿಮಾನ'ದಿಂದ ಇಳಿದು ಬಂದನೆಂದೂ ಅನ್ನುವದು ನವ್ಯದ ಅರಳು! ಆಧುನಿಕ ಜೀವನದ ಈ ಅನುಭವ ಸತ್ವದಿಂದಾಗಿ ಇಲ್ಲಿಯ ವರ್ಣನೆ ಚೇತೋಹಾರಿಯಾಗಿದೆ. ಅವರದೇ ಆದ ಮಗುವಿನ ಬಾಲಲೀಲೆಯನ್ನು ಬಣ್ಣಿಸುವ ಈ ಕೆಳಗಿನ ಕಾವ್ಯ ಪಂಕ್ತಿಗಳೂ ಭಾಷೆಯ ಹೊಸ ಸತ್ವದ ದೃಷ್ಟಿಯಿಂದ ನೋಡುವಂಥವಾಗಿವೆ:

"ಅತ್ತಿತ್ತ ಸುಳಿದೀರಿ ಮತ್ತೆ, ಜೋಕೆ!
ತಾಸಿಗಿಪ್ಪತ್ತು ಮೈಲಿನ ವೇಗ ಮೀರುವುದು
ಮನೆತುಂಬಿ ಓಡುವುದು ಅಂಬೆಗಾಲಿನ ಕಾರು,
ನೋಡ ನೋಡುತ ಧುಮುಕಿ ಹೊಡೆದು ಮೇಲೇಳುವದು
ಬ್ರೇಕು ಹಾಕಲು ವೇಗ ಮತ್ತಿಷ್ಟು ಜೋರು!"

[ಇಪನಿಂದಲೇ ನಮಗೆ ಬೈಗು-ಬೆಳಗು ದೀಪಧಾರಿ]

ಇಲ್ಲಿಯ 'ಅಂಬೆಗಾಲಿನ ಕಾರು' ಎಂಬ ರೂಪಕ; ಧುಮುಕಿ ಹೊಡೆ, ಬ್ರೇಕು ಹಾಕು, ಜೋರು ಮೊದಲಾದ ನುಡಿಕಟ್ಟು-ಇವುಗಳಲ್ಲಿಯ 'ತಾಜಾತನ' ಆಪ್ಯಾಯಮಾನವಾಗಿದೆ.

ನವ್ಯಕಾವ್ಯ 'ಗದ್ಯದ ಲಯ'ವನ್ನು ನೂತನವಾದ ಛಂದೋಗತಿಯನ್ನು ಅಳವಡಿಸಿಕೊಳ್ಳುತ್ತಿದೆ. ಈ ಛಂದಸ್ಸಿನ ನವೀನ ಪ್ರಯೋಗದ ಬಗ್ಗೆ ನವ್ಯಕವಿಗಳು ಆಗ್ರಹಹಿಡಿದರೆ, ಆಗದವರು ಆಕ್ಷೇಪವೆತ್ತಿದ್ದುಂಟು. ಹೀಗಿರುವಾಗ ಈ ಕುರಿತಾದ ಆಕ್ಷೇಪಣೆಗಳೇನೆಂಬುದನ್ನು ಮೊದಲು ನೋಡುವದು ಹಿತಕರ.

ನವ್ಯಕವಿಗಳ ಛಂದಸ್ಸಿನಲ್ಲಿಯ ನವೀನ ಪ್ರಯೋಗಗಳನ್ನು ಸಮಾ-ಲೋಚಿಸುತ್ತ ವಿಮರ್ಶಕರೊಬ್ಬರು, "ಅಸಮರ್ಥ ಕವಿಗಳು 'ಸ್ವಚ್ಛಂದ ಛಂದ' ಎಂಬ ಹೆಸರಿನಲ್ಲಿ ಕೆಟ್ಟಗದ್ಯವನ್ನು ಬರೆದಿದ್ದಾರೆ....ಶ್ರವಣ ವೇದ್ಯವಾದ ಛಂದಸ್ಸು ನೋಟದಿಂದ ನಿರ್ಧರಿಸಬೇಕಾಗಿಲ್ಲ" — ಎಂಬುದಾಗಿ ಅಭಿಪ್ರಾಯ ಪಟ್ಟು. ನವ್ಯ ಕಾವ್ಯದ ಪ್ರಥಮ ಪ್ರಾತಿನಿಧಿಕ ಸಂಕಲನ 'ನವ್ಯಧ್ವನಿ'ಯಲ್ಲಿಯ, ಶ್ರೀ ಗಂಗಾ-ಧರ ಚಿತ್ತಾಲರ ಕವನ 'ಘಾಟಿ'ಯಿಂದ ಆಯ್ದ ಕಾವ್ಯ ಪಂಕ್ತಿಗಳನ್ನು ಹೀಗೆ ಉದಾಹರಿಸಿದ್ದಾರೆ:

"ನಮ್ಮ ಮನೆಯ ಹೊಸ್ತಿಲನು ಸೇರುತಿರುವಾಗಲಂತೂ
ಎದೆಯು ಧಸ್ಸೆಂದಿತ್ತು"

ಈ ಪಂಕ್ತಿಗಳನ್ನು ನೋಡಿದರೆ ಕಾವ್ಯದ ಜೀವಾಳವಾದ 'ಲಯ' ಇಲ್ಲ ವೆಂದೇ ತೋರುತ್ತದೆ. ಆದರೆ ವಿಮರ್ಶಕರು ಈ ಅವತರಣಿಕೆಯನ್ನೇ ತಪ್ಪಾಗಿ ಕೊಟ್ಟಿದ್ದಾರೆ. ಮೂಲದಲ್ಲಿ ಈ ಸಾಲು,

"ನಮ್ಮ ಮನೆ ಹಿತ್ತಿಲನು ಸೇರುತಿರುವಾಗಂತೂ.........."

ಎಂದಿದೆ. ಇದರಲ್ಲಿಯ ಛಂದೋಲಯ ಸಹೃದಯರಿಗೆ ಅರಿವಾಗಬಹುದಾಗಿದೆ.

ಆದಿರಲಿ ಇದೀಗ ನಾವು ಕಾವ್ಯಕ್ಕೂ ಛಂದಸ್ಸಿಗೂ ಇರಬೇಕಾದ ಸಂಬಂಧದ ಸ್ವರೂಪದ ಬಗ್ಗೆ ಒಂದಿಷ್ಟು ವಿವೇಚಿಸಬೇಕಾಗಿದೆ. ಕವಿಯ ಭಾವ, ಅನುಭವ ಆಶಯಗಳು ಅಭಿವ್ಯಕ್ತಿಗೊಳ್ಳುವಾಗ ಛಂದಸ್ಸು ತಂತಾನೇ ಅದನ್ನು ಅನುಸರಿಸಿ ಬರಬೇಕೇ ವಿನಃ ಛಂದಸ್ಸಿನ ಬೆನ್ನುಹತ್ತಿ ಕವಿಯ ಭಾವಾನುಭವಗಳು ಹೋಗಬಾರದು. ಹಿಂದಿನ ಕಾವ್ಯದಲ್ಲಿ ಕಟ್ಟುನಿಟ್ಟಿನ ಛಂದೋಬಂಧ ಇರುತ್ತಿತ್ತು —ಕಟ್ಟಿಸಿದ ಕಾಲುವೆಯಂತೆ! ಕವಿಯು ತನ್ನ ಭಾವಾನುಭವಗಳನ್ನು ಅದರಲ್ಲಿಯೇ ಹರಿಬಿಡಬೇಕಾಗುತ್ತಿತ್ತು. ಹೀಗಾಗಿ ಎಷ್ಟೋಬಾರಿ ಕಾವ್ಯದಲ್ಲಿ ಶಿಥಿಲತೆ ನುಸುಳಿ-ಕೊಳ್ಳುತ್ತಿತ್ತು! ಆದರೆ ಇಂದಿನ ಕಾವ್ಯ ಆ ಅಪಾಯದಿಂದ ತನ್ನನ್ನು ತಾನು ರಕ್ಷಿಸಿಕೊಳ್ಳಬಯಸಿದೆ. ಕವಿಯ ಭಾವಾನುಭವಗಳು ನೈಸರ್ಗಿಕ ಪ್ರವಾಹದಂತೆ

ಸ್ವಚ್ಛಂದವಾಗಿ ಹರಿಯುತ್ತ, ತಮ್ಮ ದಾರಿಯನ್ನು ತಾವು ಕೊರೆದು ಕೊಳ್ಳಬೇಕು; ತಮಗೆ ಬೇಕೆನಿಸಿದಲ್ಲಿ ಬೇಕೆನ್ನುವಂತೆ ಆಳ-ಅಗಲಗಳನ್ನು ಅಳವಡಿಸಿಕೊಳ್ಳಬೇಕು—ಇದು ಆಧುನಿಕರ—ನವ್ಯರ—ಆದರ್ಶ. ಈ ಛಂದಸ್ಸಿನ, ಛಂದೋಲಯದ ಸ್ವರೂಪವನ್ನು ವಿವರಿಸುತ್ತ ಖ್ಯಾತ ವಿಮರ್ಶಕ ಶ್ರೀ ಗೌರೀಶ ಕಾಯ್ಕಿಣಿಯವರು 'ಮಣ್ಣಿನ ಮೆರವಣಿಗೆ'ಯ ಹಿನ್ನುಡಿಯಲ್ಲಿ ಬರೆದ ಮಾತು ಮಹತ್ವದ್ದಾಗಿವೆ:

"ನವ್ಯಕಾವ್ಯದ ನಿಜವಾದ ಲಯ ಈ ರೀತಿಯದು. ಇಲ್ಲಿ ಲಯಗಣ ಗುಣಿತವಲ್ಲ, ಸಮಗ್ರ ಕವನದ ಗತಿಧರ್ಮ. ಒಂದು ರಾಗದ ಆಲಾಪದಂತೆ, ವೃಂದವಾದನದ ಸಂಘಟಿತ ಸಂಗೀತದಂತೆ (Orchestral Symphony). ಇದರ ತೋರಿಕೆಯ ಸಂಕೀರ್ಣತೆಯು ಕಾಂತಿಯುಕ್ತವಾಗುತ್ತದೆ."

ಈ ತಮ್ಮ ಅಭಿಪ್ರಾಯಕ್ಕೆ ನಿದರ್ಶನವಾಗಿ ಅವರು ವಿವೇಚಿಸಿದ ಕವಿ ಕಣವಿ ಅವರ 'ನಾಳಿನ ನವೋದಯ' ಕವನ ಪಂಕ್ತಿಗಳು ಹೀಗಿವೆ:

"ಬೆಳಗಾಯಿತು—
ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ
ಹೊಂಬಿಸಲು ಸೂಸಿ ಹೂಗಾಳಿ ಹರಿದಾಡಿತು.
ನೀಲಿಯಾಗಸದ ತೊಳೆದ ಪಾಟಿಯ ಮೇಲೆ
ಹಕ್ಕಿಧ್ವನಿ ಮೂಡಿ ತೀಡಿತು ಹೊಸದೊಂದ ವರ್ಣಮಾಲೆ!"

ಆದ್ದರಿಂದ ನವ್ಯಕಾವ್ಯದ ಛಂದೋಗತಿಯು ಕೆಟ್ಟ ಗದ್ಯದ ಗತಿಯಲ್ಲ; 'ಬಂಧವಿರದೆ ಬಂಧುರ, ಸ್ವಚ್ಛಂದ ಸುಂದರ' ಲಯವುಳ್ಳ ಗತಿಯಾಗಿದೆ.

೫

ಪ್ರತಿಮೆ-ಸಂಕೇತಗಳು ನವ್ಯಕಾವ್ಯದ ಜೀವಜೀವಾಳವಾಗಿವೆ. ಹೇಳಬೇಕಾದುದನ್ನು ಆದಷ್ಟು ಸಂಗ್ರಹವಾಗಿ, ಸೂಚ್ಯವಾಗಿ, ಧ್ವನಿಪೂರ್ಣವಾಗಿ ಹೇಳಲು ಇವು ನೆರವಾಗುತ್ತವೆ. ಅರ್ಥಾತ್ ಆಶಯದ ಅಭಿವ್ಯಕ್ತಿಗೆ ಉತ್ಕಟತೆಯನ್ನೂ ಪರಿಣಾಮ ರಮಣೀಯತೆಯನ್ನೂ ತಂದು ಕೊಡುತ್ತವೆ. ಇವುಗಳಿಂದಾಗಿಯೇ 'ನವ್ಯಕಾವ್ಯ' 'ಅರ್ಥವಾಗುವದಿಲ್ಲ'—ಎಂದು ಆಕ್ಷೇಪಿಸುವುದುಂಟು. ಅದು ಕಾರಣ ಈ ಪ್ರತಿಮೆ—ಸಂಕೇತಗಳ ಸ್ವರೂಪವನ್ನರಿಯುವದು ಅಗತ್ಯವಾಗಿದೆ. ಕವಿಯು ತನ್ನ ಅಭಿವ್ಯಕ್ತಿಯ ಉತ್ಕಟತೆಗಾಗಿ, ಅರ್ಥವಂತಿಕೆಯ ಉತ್ಕರ್ಷಕ್ಕಾಗಿ ಆಲಂಕಾರಿಕ ಭಾಷೆಯನ್ನು ಉಪಯೋಗಿಸುತ್ತಾನೆ. ಈ ದಾರಿಯಲ್ಲಿ ಮೊದ

ಮೊದಲು ಆತ ಉಪಮೆ-ರೂಪಕಾದಿಗಳಿಗೆ ಶರಣು ಹೋಗುತ್ತಿದ್ದ, 'ಮುಖ ಕಮಲದ ಹಾಗೆ ಇದೆ' 'ಸಂಸಾರ ಸಾಗರ' ಎಂಬುದಾಗಿ ಉಪಮೆ-ರೂಪಕಗಳನ್ನು ಬಳಸಿ ತನ್ನ ಅಭಿವ್ಯಕ್ತಿಯ ಅಲಂಕರಣ ಮಾಡಿಕೊಂಡು ಅದರ ಅರ್ಥವಂತಿಕೆಯನ್ನೂ ಸ್ವಾರಸ್ಯವನ್ನೂ ಹೆಚ್ಚಿಸಿಕೊಳ್ಳುತ್ತಿದ್ದ. ಇದಕ್ಕೂ ಒಂದು ಹೆಜ್ಜೆ ಮುಂದು ಹೋಗಿ ಆತ 'ಉಪಮಾನ' ಮಾತ್ರಗಳನ್ನು ಉಲ್ಲೇಖಿಸಿ ಮೂಲವಸ್ತುವಿನ ಸೊಬಗು ಸೂಚ್ಯವಾಗಿ ಪ್ರಕಾಶಗೊಳ್ಳುವಂತೆ ಮಾಡಹತ್ತಿದ. ಹಾಗೆ ಆತ ಶರಣುಹೋದ ಅಭಿವ್ಯಕ್ತಿಯ ಸಾಧನಗಳೇ ಪ್ರತಿಮೆ-ಸಂಕೇತಗಳು.

ಯಾವುದೊಂದು ವಸ್ತುವಿನ ಬಾಹ್ಯಾಕೃತಿಯ ಪ್ರತಿಕೃತಿಯೇ ಪ್ರತಿಮೆ (Image) ಆಗಿದೆ. ಆದ್ದರಿಂದ ಇದು ನೇರವಾಗಿ ಮೂಲ ವಸ್ತುವನ್ನು ಮಾತ್ರವೇ ಸೂಚಿಸುತ್ತದೆ—ಗಾಂಧೀಜಿಯ ಶಿಲಾಪ್ರತಿಮೆ ಗಾಂಧೀಜಿಯವರನ್ನು ಮಾತ್ರವೇ ನಿರ್ದೇಶಿಸುವಂತೆ. ಆದರೆ ಕಾವ್ಯಪ್ರಾಂತದಲ್ಲಿ ಅದು ಮೂಲವಸ್ತುವಿನ ಮನೋ-ಬಿಂಬದ ಪ್ರತಿರೂಪವಾಗಿರುತ್ತದೆ. "ಈಸಬೇಕು ಇದ್ದು ಜೈಸಬೇಕು" ಎಂಬ ಪದ್ಯದಲ್ಲಿಯ 'ಸಾಗರ' ಸಂಸಾರವನ್ನೇ ಸೂಚಿಸುತ್ತದೆ. ಅದರಂತೆ "ಮೂರು ದಿನದ ಸಂತೀ ಮುನ್ನೋಡಿ ಮಾಡಿಕೊ ಗರ್ದಿ ನಡೆಯದು ಮಧ್ಯಾನ್ಹ ಮ್ಯಾಲಾ" ಎಂಬಲ್ಲಿ 'ಸಂತಿ' ನಮ್ಮ ಬದುಕಿನ ಪ್ರತಿಮೆಯೇ ಆಗಿದೆ.

ಒಟ್ಟಿನಲ್ಲಿ ಈ ಕಾವ್ಯ ಪ್ರತಿಮೆ ಮೂಲವಸ್ತುವಿನ ಅನುಪಸ್ಥಿತಿಯಲ್ಲಿ-ಯೇ ಅದನ್ನು ನಿರ್ದೇಶಿಸುವಲ್ಲಿ ಯಶಸ್ವಿಯಾಗುತ್ತದೆ.

'ಪ್ರತಿಮೆ' ಕೇವಲ ವಿಶಿಷ್ಟವಾದ ಯಾವದೋ ಒಂದು ಮೂಲ ವಸ್ತುವನ್ನು—ಏಕಮಾತ್ರ ಮನೋಬಿಂಬವನ್ನ ನಿರ್ದೇಶಿಸುತ್ತದೆ. ಅಷ್ಟರ ಮಟ್ಟಿಗೆ ಅದರ ಅರ್ಥವಂತಿಕೆ ಸೀಮಿತವಾಗಿರುತ್ತದೆ. ಆದರೆ 'ಸಂಕೇತ'ದ ವಿಷಯ ಹಾಗಲ್ಲ. ಇದೂ ಮೂಲವಸ್ತುವಿನ ಅನುಪಸ್ಥಿತಿಯಲ್ಲಿ ಆ ವಸ್ತುವನ್ನು ಸೂಚಿಸುತ್ತದೆಯಾದರೂ, ಆ ವಸ್ತು ಇದೇ ಎಂದು ಖಚಿತವಾಗಿ, ನಿರ್ದಿಷ್ಟವಾಗಿ ಹೇಳಬರುವಂತಿಲ್ಲ ಏಕಕಾಲದಲ್ಲಿಯೇ ಅನೇಕ ವಸ್ತುಗಳಿಗೆ ಅನ್ವಯಿಸುವ ಅನೇಕ ಅರ್ಥದ ಒಳಪದರುಗಳನ್ನು ಅದು ಒಳಗೊಳ್ಳಬಹುದಾಗಿದೆ. ಒಬ್ಬ ಕವಿ ಪ್ರಸಿದ್ಧ ಉಪಮಾನವಾದ 'ಕಮಲ'ವನ್ನೇ-ಮೂಲವಸ್ತುವಿನ ನಿರ್ದೇಶನವಿಲ್ಲದೆಯೇ-ಸಾಂಕೇತಿಕವಾಗಿ ಬಣ್ಣಿಸಿದ್ದಾನೆಂದು ಇಟ್ಟುಕೊಳ್ಳುವ. ಇಲ್ಲಿ ವರ್ಣಿತವಾದ 'ಕಮಲ' ಒಬ್ಬೊಬ್ಬ ರಸಿಕನಲ್ಲಿ ಒಂದೊಂದು ಬಗೆಯ ಅರ್ಥವನ್ನು ಹೊಳೆಯಿಸಬಹುದಾಗಿದೆ. ರಸಿಕ-ನೊಬ್ಬನಿಗೆ ಅದು ಯಾವುದೋ ಚಲುವೆಯ 'ಮುಖ' ಎಂದೆನಿಸಬಹುದು. ಭಾರತೀಯ ಸಂಸ್ಕೃತಿಯಲ್ಲಿ ಮಿಂದೆದ್ದ ಮನಸ್ಸಿಗೆ ಅದೇ 'ಭಾರತೀಯ ಸಂಸ್ಕೃತಿ'-ಯ ಸಂಕೇತವೆನಿಸಲೂ ಬಹುದಾಗಿದೆ. ಇಂಥ ಸಾಂಕೇತಿಕತೆ ಈ ಹಿಂದೆಯೂ ನವೋದಯ ಕಾವ್ಯದ ಕಾಲದಲ್ಲೂ ಇತ್ತು.

'ಬೆಳಗು' ಕವಿತೆಯಲ್ಲಿ ಕವಿ ಬೇಂದ್ರೆಯವರು ಸೂರ್ಯೋದಯದ ಹೊತ್ತಿನಲ್ಲಿ ಆಗುವ ಪ್ರಕೃತಿ ವ್ಯಾಪಾರಗಳಿಗೆ ಕನ್ನಡಿ ಹಿಡಿದಿದ್ದಾರೆ. ಆ ಬೆಳಗಾಗುವಿಕೆ, ರತ್ನದ ರಸದ ಕಾರಂಜಿ ಪುಟಿಯುವಿಕೆ, ಮೊಗ್ಗೆ ಅರಳುವಿಕೆ, ಅಮೃತ ಬಿಂದುವಿನಂಥ ಮಂಜಿನ ಹನಿ ಬೀಳುವಿಕೆ, ತಂಗಾಳಿಯು ತೀಡುವಿಕೆ, ಹಕ್ಕಿಗಳ ಹಾಡುವಿಕೆ —ಈ ಒಂದೊಂದು ಸೃಷ್ಟಿವ್ಯಾಪಾರವನ್ನು ಅತ್ಯಂತ ಸೊಗಸಾಗಿ, ಸುಂದರವಾಗಿ ಬಣ್ಣಿಸಿದ್ದಾರೆ. ಕೊನೆಯಲ್ಲಿ

"ಶಾಂತಿರಸವೇ ಪ್ರೀತಿಯಿಂದಾ
ಮೈದೋರಿತಣ್ಣಾ
ಇದು ಬರಿ-ಬೆಳಗಲ್ಲೋ ಅಣ್ಣಾ"

ಎಂದು ಕವನಕ್ಕೆ ಮಂಗಳ ಹಾಡಿದ್ದಾರೆ ಮೇಲುನೋಟಕ್ಕೆ ಇದರಲ್ಲಿ ತಲೆಬರಹದ ವಾಚ್ಯಾರ್ಥ ಸೂಚಿಸುವಂತೆ ಕೇವಲ ಪ್ರಕೃತಿವರ್ಣನೆ ಇದೆಯೆಂದೆನಿ-ಸುತ್ತದೆ. ಆದರೆ ಬೇಂದ್ರೆಯವರೇ ಅದಷ್ಟೇ ಅದರರ್ಥವಲ್ಲವೆಂದು ಕವಿತೆಯ ಮುಗಿತಾಯದಲ್ಲಿ ಸ್ಪಷ್ಟ ನಿರ್ದೇಶನವಿತ್ತಿದ್ದಾರೆ. ಮಾತ್ರವಲ್ಲ, ಈ ಕವಿತೆಯ ಭಾವ-ಸಂದರ್ಭ-ಸೂಚನೆಯನ್ನು ಈ ಬಗೆಯಾಗಿ ಕೊಟ್ಟಿದ್ದಾರೆ:

"ಧಾರವಾಡದ ಅತ್ತಿಕೊಳ್ಳದ ಚೆಲುವಿನ ನೋಟದಿಂದ ಪ್ರೇರಿತವಾದದ್ದು, ಸದಾನಂದಿಯಾದ ಜಂಗಮನೊಬ್ಬನು ಹಾಡಿದನೆಂಬಂತೆ ಬರೆದುದು."

ಬೇಂದ್ರೆಯವರ ಈ ಟಿಪ್ಪಣಿಯ ಹಿನ್ನೆಲೆಯಲ್ಲಿ ಕವಿತೆಯನ್ನು ಸಮೀಕ್ಷಿಸಿದಾಗ ನಮಗನಿಸುತ್ತದೆ— ಇದು ಕೇವಲ 'ಬೆಳಗಿ'ನ ವರ್ಣನೆಯಲ್ಲ; ಸದಾನಂದಿಯಾದ ಜಂಗಮನ ಅಂತರಂಗದ ಅಜ್ಞಾನವನ್ನು ಭೇದಿಸಿ ಮೇಲೆದ್ದ ದಿವ್ಯಜ್ಞಾನದ ಸೂರ್ಯೋದಯ ಎಂದು!

ಕವಿಯೊಬ್ಬನ ಮನದಾಳದಿಂದ ಮೇಲೆದ್ದು ರೂಪುಗೊಳ್ಳುವ, ಒಡ-ಮೂಡುವ ಕಾವ್ಯ ಸೃಷ್ಟಿಯ ಅರ್ಥದ ಇನ್ನೊಂದು ಒಳಪದರೂ ಇದರಲ್ಲಿದೆಯೆಂದು ಖ್ಯಾತ ವಿಮರ್ಶಕ ಶ್ರೀ ಕೆ. ಡಿ. ಕುರ್ತಕೋಟಿಯವರು ಒಂದೆಡೆಗೆ ಉಲ್ಲೇಖಿಸಿ-ದ್ದಾರೆ. ಅಲ್ಲದೆ ಕವಿ ಕರ್ಕಿ ಅವರಿಗೆ ಇದರಲ್ಲಿ ಇನ್ನೂ ಒಂದು ಅರ್ಥದ ಹೊಳವು ಕಂಡಿದೆ. ಅವರು ಮಣಿಪಾಲ ಸಾಹಿತ್ಯ ಸಮ್ಮೇಲನದ ಅಂಗವಾಗಿ ಜರುಗಿದ ಕವಿಗೋಷ್ಠಿಯ ಉದ್ಘಾಟನೆಯನ್ನು ಮಾಡುತ್ತ ಇಲ್ಲಿ ನಮ್ಮ ನಾಡಿನ ನವಜಾಗರಣದ ಚಿತ್ರಣವೂ ಅಡಕವಾಗಿದೆಯೆಂದು ಹೇಳಿದ್ದಾರೆ.

"A good Poem grows in meaning with every good reader" ಒಳ್ಳೆಯ ಕವಿತೆಯ ಅರ್ಥ ಪರಿಮಿತವಾಗಿರುವದಿಲ್ಲ; ಸಹೃದಯರು

ಸವಿಯುತ್ತ ಹೋದಂತೆ ಅದರಲ್ಲಿ ಹೊಸ ಹೊಸ ಅರ್ಥಸ್ಫುರಣೆ ಆಗುತ್ತದೆಂದು ಹೇಳಲಾಗುವ ಮಾತನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.

ಆದ್ದರಿಂದ ನವ್ಯಕಾವ್ಯದಲ್ಲಿ ಸಂಕೇತಗಳ ಬಳಕೆ ಇದೆಯೆಂದು ನಾವು ಆಕ್ಷೇಪಿಸಬೇಕಿಲ್ಲ; ಆ ಸಂಕೇತಗಳನ್ನು ಅರಿತುಕೊಳ್ಳಲು- ಆಸ್ವಾದಿಸಲು ತಾಳ್ಮೆ-ಯಿಂದ, ಶ್ರದ್ಧೆಯಿಂದ ಶ್ರಮಿಸಬೇಕಾಗಿದೆ.

ನಾವು ಬಳಸುವ 'ಛತ್ರಿ'ಯ ಕುರಿತಾದ ಶ್ರೀ ಜಿ. ಎಸ್. ಶಿವರುದ್ರಪ್ಪನವರ ಒಂದು ಕವನ ನೋಡಿರಿ.

"ಈ ಛತ್ರಿ ನನ್ನದು; ನನಗೂ ಇದಕ್ಕೂ ಬಹಳ ಕಾಲದ ನಂಟು, ಮಳೆ ಬಿಸಿಲಿನಲ್ಲಿ ಇದು ನನ್ನ ಎಡೆಬಿಡದ ಸಂಗಾತಿ, ಬರಿ ಛತ್ರಿಯಲ್ಲ, ಇದು ಪ್ರಶ್ನಾರ್ಥಕ ಚಿಹ್ನೆ! ಈ ಪ್ರಶ್ನೆಯನ್ನು ಹಿಡಿದು ನನ್ನ ದಾರಿಯ ಸಾನು ತುಳಿಯದ ದಿನವೆ ಇಲ್ಲವೆಂದರು ಸರಿಯೆ. ಪ್ರಶ್ನೆಯಿಲ್ಲದ ಬದುಕೊಂದು ಬದುಕೆ? ನನಗಿಲ್ಲ ಪೂರ್ಣವಿರಾಮವನ್ನರಸಿ ನಡೆಯುವ ಬಯಕೆ. ಈ ಪ್ರಶ್ನೆಯ ಕೆಳಗೆ ಮಡಿಸಿರುವ ಸಂಶಯದ ನೆರಳ ಬಿಚ್ಚಿ ನಡೆಯುವದು ನನಗಿಷ್ಟ!

ಹೆಂಗಸರ ಛತ್ರಿಯೋ ವಿಸ್ಮಯದ ಚಿಹ್ನೆ! ಅದರಿಂದಲೇ ಅವುಗಳಿಗಷ್ಟು ಬಣ್ಣ-ಬೆಡಗು. ಪ್ರಶ್ನೆಯಿಂದ ವಿಸ್ಮಯದ ತನಕ ಹಬ್ಬಿದೆ ಬದುಕು ಎರಡು ಛತ್ರಿಯ ನಡುವೆ, ಹೆಣ್ಣಿಗೆ ಗಂಡು ಪ್ರಶ್ನೆ, ಗಂಡಿಗೆ ಹೆಣ್ಣು ವಿಸ್ಮಯ. ಅದಕ್ಕೆ ಚಿತವಾಗಿವೆ ಛತ್ರಿಯ ಮಾಟ. ಇದರೊಳಗು ಇರಬಹುದು ಮಾಡಿದಾತನ ಕೂಟ"

ಇಲ್ಲಿಯ ಸಂಕೇತ ಸರಳವು, ಸುಲಭವೂ ಆಗಿದ್ದು ಅರ್ಥಪೂರ್ಣವಾಗಿದೆ. ಸಾಮಾನ್ಯವಾದ ಗಂಡು-ಹೆಣ್ಣಿನ ಛತ್ರಿಗಳ ಸಂಕೇತದಿಂದ ಬಾಳ-ಬದುಕಿನ ರಹಸ್ಯದ ಮೇಲೆ ಬೆಳಕು ಚಲ್ಲುವ ರೀತಿ ಅನನ್ಯವಾಗಿದೆ. ಛತ್ರಿಗಳ 'ಹಿಡಿಕೆ'ಗಳ ರಚನಾ ವೈವಿಧ್ಯ, ಬಟ್ಟೆಯ ಬಣ್ಣ-ಬೆಡಗುಗಳ ವೈಲಕ್ಷಣ್ಯಗಳ ಆಧಾರದ ಮೇಲೆ ಕವಿ ನಿಲ್ಲಿಸಿದ ಜೀವನ ರಹಸ್ಯದ ಸೌಧ ಅಸಾಮಾನ್ಯವಾಗಿದೆ, ಅದ್ಭುತವಾಗಿದೆ!

ಸಂಕೇತಗಳು ನಾವು ಈ ಮೇಲೆ ನೋಡಿದಂತೆ ಕೇವಲ ಸರಳವಾಗಿರುವದಿಲ್ಲ. ಅವು ಸಂಕೀರ್ಣವಾಗಿರುವುದೂ ಉಂಟು. ಈ ಸಂಕೀರ್ಣತೆ 'ಅನುಭವ-'ಆಶಯ'ಕ್ಕೆ ಸಂಬಂಧಿಸಿದ್ದಾಗಿರಬಹುದು; 'ಅಭಿವ್ಯಕ್ತಿ'ಗೆ ಸಂಬಂಧಿಸಿದ್ದಾಗಿರಲೂ ಬಹುದು.

ಕವಿ ಕಣವಿಯವರ 'ನಾಳಿನ ನವೋದಯ' ಕವನದ ಈ ಪ್ರಥಮ ಪಂಕ್ತಿಗಳನ್ನು ಗಮನಿಸೋಣ:

"ಬೆಳಗಾಯಿತು—
ನೀಲಿಯಾಗಸದ ತೊಳೆದ ಪಾಟಿಯ ಮೇಲೆ
ಹಕ್ಕಿ ಧ್ವನಿಮೂಡಿ ತೀಡಿತು ಹೊಸದೊಂದು ವರ್ಣಮಾಲೆ!"

(ಮಣ್ಣಿನ ಮೆರವಣಿಗೆ)

ಇಲ್ಲಿಯ 'ಬೆಳಗು' ಸಾಮಾನ್ಯವಾದ ಬೆಳಗಲ್ಲ. ಇದು ನಾಡಿನ 'ಪ್ರಜಾರಾಜ್ಯದ ಉದಯ'ಕ್ಕೆ ಸಂಕೇತವಾದ ಬೆಳಗು. ಇಲ್ಲಿ ಸ್ವಚ್ಛಂದ ಸುಂದರವಾಗಿ ಹಾಡುತ್ತಿರುವ ಹಕ್ಕಿ ತನ್ನ ಭವಿಷ್ಯವನ್ನು ತಾನೇ ನಿರ್ಮಿಸಿಕೊಳ್ಳುವ ಸ್ವತಂತ್ರ ಭಾರತದ ಪ್ರಜೆಯ ಸಂಕೇತ. ಈ ಸಂಕೇತಕ್ಕೆ, "ಮಗು"ವೊಂದು ವಿದ್ಯಾರ್ಜನೆಗೆ ತೊಡಗಿ 'ವರ್ಣಮಾಲೆ' ತೀಡ ತೊಡಗುವ ಇನ್ನೊಂದು ಸಂಕೇತ ಬೆಸುಗೆಯಾಗಿದೆ. ಹೀಗೆ ಇಲ್ಲಿ ಅಭಿವ್ಯಕ್ತಿಗೊಂಡ 'ಆಶಯ' ಸರಳವಾಗಿದ್ದರೂ, ಸಂಕೇತ ಸಂಕೀರ್ಣವಾಗಿದೆ, ಸೊಗಸಾಗಿದೆ.

ಇದಕ್ಕೂ ಕ್ಲಿಷ್ಟವಾದ, ಸಂಕೀರ್ಣವಾದ ಸಂಕೇತಗಳ ಬಳಕೆಯೂ ಇಂದು ಆಗುತ್ತಿದೆ. ಕವಿ ಗೋಪಾಲಕೃಷ್ಣ ಅಡಿಗರ 'ಭೂಮಿಗೀತ'ದ ಪ್ರಾರಂಭದ ಕೆಲಸಾಲು ಹೀಗಿವೆ:

"ತೆಂಗುಗರಿಗಳ ಬೀಸಿ ಕೈಚಾಚಿ ಕರೆದಳು;
ಅಡಕಿಗೊನೆಗಿಲಕಿ ಹಿಡಿದಾಡಿಸಿದಳು.
ಕಬ್ಬಿನಾಲೆಯ ತಿರುಪಿನಲ್ಲಿ ಕುಳಿತೆರೆದಳು ಅಜಸ್ರಧಾರೆಯ
ಕರುಳತುಡಿತವನ್ನು;
ಭತ್ತ ಗೋಧುವೆ ರಾಗಿ ಜೋಳ ಮೊರ ಮೊರಮಾರಿಯಲ್ಲಿ ಮಾಂಸದ
ಹಾಡನೂಡಿಸಿದಳು;"

ಇವನ್ನು 'ಪ್ರೇಮ ಸೋದರ'ರು ಇಂತು ವಿಶ್ಲೇಷಿಸಿದ್ದಾರೆ:

"ಇಲ್ಲಿ ಕವಿಯೇ ನಾಯಕ... ...... ಈ (ಮೊದಲ ಎರಡು) ಸಾಲುಗಳು ಹುಟ್ಟಿದ ಸ್ಥಳದ ವರ್ಣನೆಯೂ ಹೌದು; ಹುಟ್ಟಿದ ಕವಿಯನ್ನು ತನ್ನ ಆಕರ್ಷಕ ಸೌಂದರ್ಯದಿಂದ ರಂಜಿಸಿದ ಪ್ರಕೃತಿಯಲ್ಲಿ ಕಂಡು ಬಂದ ತಾಯ ತೆರದ ವರ್ಣನೆಯೂ ಹೌದು............... 'ಕಬ್ಬಿನಾಲೆಯ ತಿರುಪಿನಲ್ಲಿ ಕುಳಿತೆರೆದಳು. ಅಜಸ್ರಧಾರೆಯ ಕರುಳತುಡಿತವನ್ನ' ಎಂಬ ಸಾಲು ತಾಯಿಯಾದವಳು ತನ್ನ ಕರುಳಕಂದನಿಗೆ ಮೊಲೆಯೂಡಿಸುವ ಚಿತ್ರವನ್ನು ಧ್ವನಿಸುವ, ಪ್ರತೀಕವಾಗಿದೆ. ಭೂಮಿಯೇ ಆಗ ತಾಯಾಗಿ ತನ್ನ ಸರ್ವಸತ್ವವನ್ನೂ ಅವನಿಗಾಗಿ ಮೀಸಲಿಟ್ಟ-

ಳೆಂಬುದನ್ನು ಈ ಸಾಲು ಸೂಚಿಸುತ್ತದೆ. ಮುಂದಿನ ಸಾಲು 'ಭತ್ತ ಗೋಧುವೆ ರಾಗಿ ಜೋಳ ಮೊರಮೊರ ಮೌರಿಯಲ್ಲಿ ಮಾಂಸದ ಹಾಡನೂಡಿಸಿದಳು'—ಎಂಬಲ್ಲಿ ಇಲ್ಲಿಯು ನಾಯಕನ ಬೆಳವಣಿಗೆ ಹಾಗೂ ಅವನಲ್ಲಿ ಕವಿ ಹೃದಯದ ಬೀಜಾಂಕುರವಾದುದರ ನಿರ್ದೇಶನವಿದೆ. ಮೊದಲು ಶಿಶುವಾಗಿದ್ದಾಗ ಹಾಲು ಕುಡಿದು ಬೆಳೆದದ್ದನ್ನು 'ಕಬ್ಬಿನಾಲೆ' 'ಅಜಸ್ರಧಾರೆ' 'ಕರುಳತುಡಿತ' ಎಂಬ ಪದಗಳು ಸೂಚಿಸಿ, ಮುಂದೆ ನಾಯಕನ ದೈಹಿಕವಾದ ಬೆಳವಣಿಗೆಯನ್ನು ಸೂಚಿಸಲು ಭೂಮಿ 'ಭತ್ತ' 'ಗೋಧುವೆ' 'ರಾಗಿ' 'ಜೋಳ' ಮೊದಲಾದ ಆಹಾರವನ್ನು ಊಡಿಸಿದಳೆಂದು ಹೇಳಿದೆ. ಹಾಗೆಯೇ ನಾಯಕನ ಕಾವ್ಯಶಕ್ತಿಗೆ ಪೋಷಕವಾದದ್ದನ್ನೂ ಪ್ರಕೃತಿಯೇ ಕೊಟ್ಟಳೆಂಬುದನ್ನು ಆಹಾರ ಹಾಗೂ ಸಂಗೀತಗಳ ಅಭೇದಕ್ರಿಯಾರೂಪಗಳಲ್ಲಿ ಸೂಚಿಸಿದೆ. ಮೌರಿ-ಒಂದು ಏಕರಂಧ್ರೀಯ-ವಾದ್ಯ, ಹಾಡು-ಕಾವ್ಯ, ಮಾಂಸ-ಕಾವ್ಯಸತ್ವ. ಜೀವಾಳ ಅಥವಾ ಕಾವ್ಯಪ್ರಜ್ಞೆಯ ಸಂಕೇತ. ಕಲಾದೃಷ್ಟಿಯಿಂದ ಈ ಸಾಲು.. ... ಅಚ್ಚುಕಟ್ಟಾಗಿದೆ. ಇಲ್ಲಿಯ ಭಾವ ತೀವ್ರತೆ, ಭಾಷೆಯ ಮೇಲೆ ಕವಿಗಿರುವ ಪ್ರಭುತ್ವ, ಅಭಿವ್ಯಕ್ತಿಯಲ್ಲಿ ಉಂಟಾಗುವ ಭಾವಾಭಿನಯ ಹಾಗೂ ಕ್ರಿಯೆಯ ಸಫಲ ಚಿತ್ರಣದಲ್ಲಿ ಭಾಷೆಯನ್ನು ಬಳಸಿಕೊಳ್ಳುವದರಲ್ಲಿರುವ ಕೌಶಲ ಶ್ಲಾಘ್ಯವಾದದ್ದು."

೬

ಆಕ್ಷೇಪಕ್ಕೂ ಮೆಚ್ಚಿಗೆಗೂ ಏಕಕಾಲದಲ್ಲಿಯೇ ಒಳಗಾಗಿರುವ ಇನ್ನೊಂದು ಅಂಶ ನವ್ಯಕಾವ್ಯದಲ್ಲಿ ಇದೆ. ಅದು ಅಸ್ಪಷ್ಟತೆ ಅಥವಾ ದುರೂಹತೆ. "Ambiguity is the essence of poetry" ಎಂದು William Empson ಅಭಿಪ್ರಾಯ ಪಡುತ್ತಾನೆ. ಇಂದಿನ "ಬಾಳಿನ ಜಟಿಲ ಕುಟಿಲ ಸಂಕೀರ್ಣತೆಯನ್ನು ಏಕಾಗ್ರವಾಗಿ ಸಮಗ್ರವಾಗಿ ಬಿಂಬಿಸುವ ಕಾವ್ಯಕ್ಕೆ ದುರೂಹತೆ ಅನಿವಾರ್ಯ"—ಎಂಬುದು ಗೌರೀಶ ಕಾಯಕಿಣಿಯವರ ಅಭಿಮತವಾಗಿದೆ. ಇಂಥ ಅಸ್ಪಷ್ಟತೆ ಹಿಂದೆಯೂ ಇತ್ತು. ಬೇಂದ್ರೆಯವರು ತಮ್ಮ 'ಭಾವಗೀತ'ದಲ್ಲಿ ಕಲ್ಪನಾವಿಲಾಸವು ಭೃಂಗದ ಬೆನ್ನೇರಿ ಬಂದ ಬಗೆಯನ್ನು ಬಣ್ಣಿಸುತ್ತ,

"ಮುಸೆದ ಗಾಳಿ ಪಕ್ಕಪಡೆಯುತ್ತಿತ್ತು ಸಹಜಪ್ರಾಸಾ" ಎಂದಿದ್ದಾರೆ. 'ಗಾಳಿಮುಸೆಯುವದೆಂದರೇನು? ಇದೇನು-ಹುಚ್ಚುಚ್ಚಾರ?' ಎಂದು ಈ ಬಗ್ಗೆ ನನ್ನ ಪ್ರೊಫೆಸರರೊಬ್ಬರು ಆಕ್ಷೇಪವೆತ್ತಿ, ಸ್ವತಃ ಕವಿಗಳಿಂದಲೂ ಅದರ ಅರ್ಥ-ವಿವರಣೆ ಪಡೆಯದೆ ನಿರಾಶರಾದದ್ದನ್ನು ನಾನು ಬಲ್ಲೆ. ಆದರೆ ಇತ್ತೀಚೆ ಶ್ರೀ ಶಂಕರ ಮೊಖಾಶಿ ಪುಣೇಕರರು ತಮ್ಮ 'ಕಾವ್ಯಮೀಮಾಂಸೆ'ಯಲ್ಲಿ ಇದರ ವಿವರಣೆಯನ್ನು ನನಗೆ ತಿಳಿದ ಮಟ್ಟಿಗೆ ಮೊದಲ ಬಾರಿಗೆ ಹೀಗೆ ಮಾಡಿದ್ದಾರೆ.

"ಕಲ್ಪನಾ ವಿಲಾಸವು ಭೃಂಗದ ಬೆನ್ನೇರಿ ಬರುವಾಗ ಅದಕ್ಕೆ ಸಹಜ (ಸಹ-ಜ)ವಾಗಿ ಪಕ್ಕಗಳು ಗಾಳಿಯೊಡನೆ ತಿಕ್ಕಾಡಿದ್ದರಿಂದ ಪ್ರಾಸವನ್ನು ಒಡಗೊಂಡೇ ಬಂದಿತಂತೆ!"

ಬಹುಶಃ ಇಂತಹ ಅಸ್ಪಷ್ಟತೆಗೆ, ದುರೂಹತೆಗೆ ಕಾವ್ಯ ಸೃಷ್ಟಿಯಲ್ಲಿ ಕಾರ್ಯಪ್ರವೃತ್ತವಾಗುವ ಕವಿಯ ಸುಪ್ತಮನ-ಅಜಾಗ್ರತ ಚಿತ್ತವೇ ಕಾರಣವಾಗಿದೆಯೆಂದೆನಿಸುತ್ತದೆ. ವಸ್ತುಸ್ಥಿತಿ ಹೀಗಿರುವಾಗ ಇಂಥ ದುರೂಹತೆಯುಳ್ಳ ಕಾವ್ಯ ಭಾಗಗಳನ್ನು ಸಹೃದಯತೆಯಿಂದ ಗಮನಿಸಬೇಕಾಗುತ್ತದೆ.

೭

ಬೇರೆ ಬೇರೆ ಇಂದ್ರಿಯಾನುಭವಗಳ ಮಿಶ್ರಣದಿಂದ ಅಭಿವ್ಯಕ್ತಿಗೆ ಒಂದು ಹೊಸಹೊಗರು ತರಲೆತ್ನಿಸುವದು ಇಂದಿನ ಕಾವ್ಯದ ಮತ್ತೊಂದು ತಂತ್ರ ವೈಲಕ್ಷಣ್ಯವಾಗಿದೆ:

"ಕಣ್ಣು ಬಿಟ್ಟರೆ ಬಣ್ಣ ಬಣ್ಣ ಗೊಗ್ಗರು ಗಲಿಭೆ;
ಕಿವಿತುಂಬ ಹಸುರು, ಬಿಳಿ, ಹಳದಿ, ಕೆಂಪು"

(ಭೂಮಿಗೀತ-ಅಡಿಗ)

——— ಎಂಬಲ್ಲಿ ಕಣ್ಣು-ಕಿವಿಗಳ ಅನುಭವಗಳ ಬೆರಕೆಯಾಗಿದ್ದರೆ,
"ಔತಣಕೆ ಕರೆ ಬೇಕೆ?
ಅಡಿಗೆಯ ಕಂಪು ಮುಗಿಲೆತ್ತರಕೆ ಕಣಿಕೆಯನೆಸೆದು
ಸೆಳೆದಿರುವಾಗ............"

(ಔತಣ:- ಜಿ. ಎಸ್. ಶಿವರುದ್ರಪ್ಪ)

ಎಂಬಲ್ಲಿ ಮೂಗಿನ ಕಣ್ಣಿನ ಅನುಭವಗಳ ಕಸಿಯಾಗಿದೆ.

"ನೀಲಿಯಾಗಸದ ತೊಳೆದ ಪಾಟಿಯ ಮೇಲೆ
ಹಕ್ಕಿ-ಧ್ವನಿ ಮೂಡಿ ತೀಡಿತು ಹೊಸದೊಂದು ವರ್ಣಮಾಲೆ!"

(ನಾಳಿನ ನವೋದಯ: ಕಣವಿ)

ಎಂಬಲ್ಲಿ 'ಹಕ್ಕಿಧ್ವನಿ' ಎಂಬ ಕಿವಿಯ ಅನುಭವಕ್ಕೆ ವರ್ಣಮಾಲೆ ತೀಡುವಿಕೆಯ ಕಣ್ಣಿನ ಅನುಭವದ ಕಲಮು ಮಾಡಲಾಗಿದೆ. 'ಇವಳ ತೊಡಿಗೆ

ಅವಳಿಗಿಟ್ಟು, ಅವಳ ತೊಡಿಗೆ ಇವಳಿಗಿಟ್ಟು ನೋಡಬಯಸಿದೆ' ಎಂಬಂತಾಗಿದೆ. ಇದರಿಂದ ಬೆಳಗಿನ ಹೊಸಗಾಳಿ ಬೀಸಿದ ಅನುಭವವಾಗುತ್ತಿದೆ.

೮

'ಆಶಯ'ದ ಅಭಿವ್ಯಕ್ತಿಯ ಅರ್ಥಪುಷ್ಟಿಗಾಗಿ ಅನ್ಯಕವಿಗಳ ಕಾವ್ಯ ಪಂಕ್ತಿಗಳನ್ನು ಉದ್ಧರಿಸುವದು, ನವ್ಯಕಾವ್ಯದ ಮಗುದೊಂದು ವಿಶೇಷವಾಗಿದೆ. ಇಂಥ ಉದ್ಧೃತ ಪಂಕ್ತಿಗಳ ವೈದೃಶ್ಯ ಅಥವಾ ಸಾದೃಶ್ಯದಿಂದ ಅಭಿವ್ಯಕ್ತಿಗೆ ಒಂದು ಹೊಸ ಮೆರಗು ಲಭಿಸುವುದು ಮಾತ್ರವಲ್ಲದೆ, ಒಮ್ಮೊಮ್ಮೆ ಒಂದು ನವೀನ ಆಯಾಮವೂ (dimension) ತೆರೆಯುತ್ತದೆ:

ಎಂ. ಅಕಬರ ಅಲಿ ಅವರ 'ಮೃಗಯಾವಿಹಾರ' ಎಂಬ ಕವಿತೆಯಲ್ಲಿಯ,

"ಪದ್ಮ ಪತ್ರದ ಜಲಬಿಂದುವಿನಂತೆ ಚಲಿತವಾದುದುಚಿತ್ತ" ಎಂಬ ಉದ್ಧೃತ ಪಂಕ್ತಿ ಗಮನಾರ್ಹವಾಗಿದೆ. ಹೆಣ್ಣನ್ನು ಕಂಡಾಗ 'ಹೊನ್ನಿಗ'ನೊಬ್ಬನ ಮನಸ್ಸು ಹೇಗೆ ಚಂಚಲವಾಯಿತು ಎಂಬ ಆಶಯದ ಅಭಿವ್ಯಕ್ತಿಯಲ್ಲಿ ಈ ಮೇಲಿನ ಕಾವ್ಯ ಪಂಕ್ತಿ ಉದ್ಧೃತವಾಗಿದೆ. ಇದು ನಾಗಚಂದ್ರನ ರಾಮಚಂದ್ರಚರಿತ ಪುರಾಣದಲ್ಲಿಯದು. ಸೀತೆಯನ್ನು ಕಂಡಾಗ ರಾವಣನಲ್ಲಾದ ಚಂಚಲ ಮನಸ್ಕತೆ-ಯನ್ನು ಕುರಿತದ್ದು. ಈ ಉದ್ಧರಣೆ ಅಭಿವ್ಯಕ್ತಿಗೆ ನೂತನ ಅರ್ಥನ್ಯಾಸದ ಆಯಾ-ಮವನ್ನೊದಗಿಸಿ ಅದರ ಅರ್ಥಸೌಷ್ಠವವನ್ನು ಅಧಿಕಗೊಳಿಸಿದೆ, ಅದರ ತೂಕ ಹೆಚ್ಚಿಸಿದೆ.

೯

ಹಳೆಯ ಮೌಲ್ಯಗಳನ್ನು ಬುಡಮೇಲು ಮಾಡುವಂಥ ವಿದ್ರೋಹಿ ಮನೋಭಾವ ಅಥವಾ ವೈಚಾರಿಕತೆ ಇಂದಿನ ಕವಿಯ ಮನೋಧರ್ಮವಾಗಿದೆ. ಈ ದೃಷ್ಟಿಯಿಂದ ಅಕಬರ ಅಲಿಯವರ 'ಲೋಕವೇ ಸಾಕ್ಷಿ' ಕವನವನ್ನು ನೋಡ-ಬಹುದಾಗಿದೆ. ಈ ಅವರ ಕವಿತೆಗೆ ಪ್ರೇರಕವಾದುದು ನಿಜಗುಣ ಶಿವಯೋಗಿಗಳ ಕವನ, 'ಕೋಗಿಲೆ'; ಅದು ಆತ್ಮದ ಸಂಕೇತವಾಗಿದೆ. ಅಲ್ಲಿ ಅವರು 'ದುರುಳ-ಕಂತುವಿನೊಡನಿರೆ ಲೋಕದೊಳು ನಿನ್ನ! ಪರಪುಟ್ಟನೆಂಬರು ಕೋಗಿಲೆ' ಎಂದದನ್ನು ಎಚ್ಚರಿಸಿದ್ದಾರೆ.'ಪರಪುಟ್ಟ'ನಾಗದಿರಲು ಅಂದರೆ ಕಾಮವೆಂಬ 'ಕಾಗೆ'ಯ ಆಶ್ರಯ ಪಡೆಯದಿರಲು ಆದೇಶವಿತ್ತಿದ್ದಾರೆ. ಅರ್ಥಾತ್ 'ಕಾಗೆ'ಯನ್ನು ಕಡೆಗಣಿಸಿ ನುಡಿದಿ-ದ್ದಾರೆ. ಅದನ್ನು ಪ್ರತಿಭಟಿಸಿ ಅಕಬರ ಅಲಿಯವರು,

"ಕಾಗೆ ಕೂಗದ ಮುನ್ನ
ಈ ಇಲ್ಲಿ ಏನಿತ್ತಣ್ಣ?
ಬರೀ ಅಂಧಕಾರದ ಶೂನ್ಯಸಿಂಹಾಸನ!
ಕಾಗೆ ಕೂಗಿನ ಸುಖದ ಸೋಂಕಿನಿಂದಲೆ ಕಾಣ
ಪ್ರಕೃತಿಯ ಮೃದಂಗ ಚೇತರಿಸಿ ಹರಿಹರಿಸಿತ್ತು
ಗಂಧರ್ವಗಾನ!
ಆ ಅದರ ಜಾಡನ್ನೆ ಹಿಡಿದು ಬಂದಿಹ ಬೆಳಕು
...........................................
ಜೀವಜಾತಕ್ಕೆಲ್ಲ ಆಯಿತ್ತು ಕಣಾ ಪ್ರಾಣಕೇತನ!
ಚಿರಂತನವಹ ಚೇತನ!"

—ಎಂದು ಕಾಗೆಯ ಅಂದರೆ ಕಾಮದ ಗುಣಗಾನ ಮಾಡಿದ್ದಾರೆ. ಕಾಗೆಯ ಕೃಪೆಯಿಂದಲೇ ಜನ್ಮತಾಳಿದ ಕೋಗಿಲೆ, ಕಾಗೆಯನ್ನು ಕಡೆಗಣಿಸುವುದು, ಕಾಗೆಗೇ ಎರಡು ಬಗೆಯುವುದು 'ತಾಯಿಗ್ಗಂಡತನ'ವೆಂದು ಖಂಡಿಸಿದ್ದಾರೆ. ಕೊನೆಯಲ್ಲಿ

"ಈ ಕಾಗೆ ಅಲ್ಲ ಅಂಥಿಂಥ ಪಕ್ಷಿ!
ಇದು ಏಕಾಕ್ಷಿ!
ನಂ ನಿಮ್ಮ ಸತ್ ಅಕ್ಷಿ, ಚಿತ್ ಅಕ್ಷಿ, ಆನಂದದಕ್ಷಿ!
ಜೀವ ಜೀವನ ರಕ್ಷಿ!
ಲೋಕವೇ ಸಾಕ್ಷಿ!"

ಎಂದು ಕಾಗೆಯ 'ಜೀವ-ಜೀವನರಕ್ಷಿ'ತನವನ್ನು ಕೊಂಡುಕೊನೆದಿದ್ದಾರೆ. ಇಲ್ಲಿಯ ಕಾಮದ ಕುರಿತ ಸಿಲುಮೆಯಲ್ಲಿ ವೈಚಾರಿಕತೆಯಿದೆ.

೧೦

ಮಡಿವಂತಿಕೆಯ ದಾಕ್ಷಿಣ್ಯವಿಲ್ಲದೆ ವಸ್ತುವಿನ ಆಯ್ಕೆ ಮಾಡುವುದು ಇಂದಿನ ಕಾವ್ಯದ ಕಣ್ಣುಕುಕ್ಕುವ ವಿಶೇಷವಾಗಿದೆ. ಅದರಲ್ಲೂ ಫ್ರಾಯಿಡ್‌ನ ಕಾಮತತ್ವದ ವಿಚಾರ ಸರಣಿಯ ಪ್ರಭಾವ ಅಧಿಕವಾಗಿದೆ. ಹಿಂದಿನವರ 'ಕಾಮ'ದ ಅವಾಸ್ತವ ತಿರಸ್ಕಾರಕ್ಕೆ ಪ್ರತಿಕ್ರಿಯೆಯಾಗಿಯೊ, ಸಲ್ಲದ ಮಡಿವಂತಿಕೆಯ ಮನೋಭಾವಕ್ಕೆ ಪ್ರತಿಭಟನೆಯಾಗಿಯೊ, ಬರೆವ ಕವಿಗಳು ಹೆಚ್ಚಾಗಿ ಯುವಕ-ರಾಗಿರುವುದರಿಂದಾಗಿಯೊ ಇಂಥ 'ಕಾಮಪ್ರಜ್ಞೆ' ಬೆಳೆದಿದೆ. ಇಂದಿನ ಕವಿ ಆಕಾಶ

ರಾಮಣ್ಣನಾಗುವುದಕ್ಕಿಂತ ನೆಲದ ಕಾಮಣ್ಣನಾಗುವುದು ಮೇಲು-ಎಂದು ನಂಬಿದ್ದಾನೆ.

ಶ್ರೀ ನಿಸಾರ್ ಅಹಮದ್ ಅವರ 'ಹೀಟಿ' ಕವನದ ಕೆಲ ಪಂಕ್ತಿ ಗಮನಿಸಿರಿ:

"ಕಟ್ಟಿಗೆಯನಾಕಂಠಪೂರ್ತಿ ಕಬಳಿಸುವಗ್ನಿ
ಚಿಮಣಿಕೊಳವೆಗಳಲ್ಲಿ ಒಳಗಿನಾಟೋಪಗಳ
ಕುರುಹಿಲ್ಲ; ತೆಳುಹೊಗೆಯ ಉಸಿರಾಟವಿದ್ದರೂ
ಬೆಂಕಿ ಬಂಡಾಯಕ್ಕೆ ಸಾಕ್ಷ್ಯವಿಲ್ಲ.
ಕಾದ ಕಾವಲಿಯಲ್ಲಿ ಸಿಡಿವ ಕಾಳಿನ ಗೋಳು
.... .... .... .... .... .... ... .... ....
........ ........ ... ............ ... .... ...
ಸೊಂಟದೀಚೆಗೆ ಸಾಚ,
ಅದರಾಚೆ ಬಲು ನೀಚ"

(ನೆನೆದವರ ಮನದಲ್ಲಿ)

ಕಾಮದ ಕಾವು ಏರಿದಾಗ ಯುವಮನದೊಳಗೆ ಏಳುವ 'ಬೆಂಕಿಬಂಡಾಯ'ದ ಚಿತ್ರ ಎಷ್ಟು ಶಕ್ತಿಯುತವಾಗಿ ರೇಖಿತವಾಗಿದೆ ನೋಡಿರಿ! "ಸೊಂಟದೀಚೆಗೆ ಸಾಚ! ಅದರಾಚೆ ಬಲು ನೀಚ" ಎಂಬ ಮಾತಿನ ಸತ್ಯ-ವ್ಯಂಗ್ಯ ಮರ್ಮಭೇದಕ ವಾಗಿದೆ!

೧೧

ಹೀಗೆ ನಮ್ಮ ಕಾವ್ಯಕ್ಕೆ ಇಂದು ನವ್ಯದ 'ರಕ್ತದಾನ' ವಾಗುತ್ತಿದೆ; ಹೊಸ ಜೀವಸತ್ವಗಳು ಲಭಿಸುತ್ತಿವೆ. ಆದರೆ ಡಾ|| ಪ್ರಭುಶಂಕರ ಅವರು ನವ್ಯ ಕಾವ್ಯಕ್ಕೆ ವ್ಯಕ್ತಪಡಿಸಿದ ತಮ್ಮ ಪ್ರತಿಕ್ರಿಯೆಯಲ್ಲಿ "ಆಡಂಬರದ ಅಬ್ಬರದಲ್ಲಿ ಮೆರವಣಿಗೆಯಾಗುತ್ತಿರುವುದು ಇಲಿಯ ಮರಿ" ಎಂದಿದ್ದಾರೆ; ಇಲ್ಲಿಯ ಟೀಕೆ ಒಂದಿಷ್ಟು ಹೆಚ್ಚಾಯಿತೇನೋ ಎಂದೆನಿಸುತ್ತದೆ—ನಿರ್ವಿಕಾರ ಚಿತ್ತದಿಂದ ನೋಡಿದರೆ. ಅವರೇ ಮುಂದುವರಿದು ಉಲ್ಲೇಖಿಸಿದ ನವ್ಯಕಾವ್ಯದ ಬಗೆಗಿನ J. Issacs ಅವರ ಅಭಿಪ್ರಾಯ ಮೌಲಿಕವಾದುದು:

"ಅದರ ಅತ್ಯಧಮ ವಿಧಾನದಲ್ಲಿ ನವ್ಯಕಾವ್ಯ

ಅವ್ಯವಸ್ಥಿತವೂ ಅಸಂಬದ್ಧವೂ ಆದ ತುಣುಕುಗಳ
ಗುಚ್ಛ; ಆದರ ಅತ್ಯುತ್ತಮ ವಿಧಾನದಲ್ಲಿ ಅದು
ಅನಂತತೆಯ ಧವಳತೆಯನ್ನು ವರ್ಣರಂಜಿತವನ್ನಾಗಿ
ಮಾಡುವ ಅನೇಕ ವರ್ಣಗಳ ಗಾಜಿನ ಗುಮ್ಮಟ!"

ಒಟ್ಟಿನಲ್ಲಿ ನವ್ಯಕಾವ್ಯ ಇಂದು ನಮ್ಮಲ್ಲಿ, ನಮ್ಮದೇ ಆದ ರೀತಿಯಲ್ಲಿ ಬೆಳೆಯುತ್ತಿದೆ; ನಮ್ಮ ಕಾವ್ಯಕ್ಕೆ ಹೊಸ ನೆಲೆ-ಬೆಲೆಗಳನ್ನು ಒದಗಿಸುತ್ತಿದೆ.



# ಕರ್ಬಲಾ ಪದಗಳು

೧

ಕನ್ನಡ ಜಾನಪದ ಸಾಹಿತ್ಯದ ಒಂದು ಕವಲಾದ 'ಕರ್ಬಲಾ-ಪದಗಳ ಹಿನ್ನೆಲೆ-ಹುಟ್ಟು, ಆಶಯ-ಅಭಿವ್ಯಕ್ತಿಗಳ ಅಭ್ಯಾಸ ಕನ್ನಡ ಸಂಸ್ಕೃತಿಯ ಮೇಲೆ ವಿಶೇಷವಾದ ಬೆಳಕನ್ನು ಚೆಲ್ಲಬಹುದಾಗಿದೆ. ಈ ದಿಸೆಯಲ್ಲಿ ನನಗೆ ಕಂಡು ಬಂದ ಒಂದೆರಡು ಸಂಗತಿಗಳನ್ನು ಇಲ್ಲಿ ನಿವೇದಿಸುತ್ತಿದ್ದೇನೆ.

'ಕರ್ಬಲಾಪದ'ಗಳನ್ನು 'ಮೊಹರಂ' ಹಬ್ಬದ ಕಾಲದಲ್ಲಿಯೇ ಹಾಡ-ಲಾಗುತ್ತಿದೆ. ಆದ್ದರಿಂದ ಅವುಗಳ ಅಭ್ಯಾಸಕ್ಕೆ ಮೊಹರಂ ಹಬ್ಬದ ಹಿನ್ನೆಲೆಯ ಅರಿವು ಅಗತ್ಯವಾಗಿದೆ.

೨

'ಮೊಹರಂ' ಮೂಲತಃ ಒಂದು ತಿಂಗಳ ಹೆಸರು. ಈ ತಿಂಗಳಲ್ಲಿ ಇಸ್ಲಾಮದ ಬೇರುಗಳನ್ನೇ ಅಲುಗಾಡಿಸಿದಂಥ, ಕರುಳು ಕರಗಿಸುವಂಥ ಒಂದು ಭಾರೀ 'ಧರ್ಮದುರಂತ' ಜರುಗಿತು. ಅದರ ಹಿನ್ನೆಲೆಯ ಕತೆ ಹೀಗಿದೆ.

ಪ್ರವಾದಿ ಮುಹಮ್ಮದ ಪೈಗಂಬರರ ತರುವಾಯ, ಇಸ್ಲಾಮೀ ಸಾಮ್ರಾ-ಜ್ಯಕ್ಕೆ 'ಧರ್ಮಪ್ರಭು'ಗಳೆನಿಸಿದ 'ಖಲೀಫ'ರನ್ನು ಆಯ್ಕೆ ಮಾಡುವ ಪ್ರಜಾಸ-ತ್ತಾತ್ಮಕ ಪದ್ಧತಿ ಬಳಕೆಯಲ್ಲಿ ಬಂದಿತು. ಆದರೆ ಮುಹಮ್ಮದ ಪೈಗಂಬರರ ಅಳಿಯಂದಿರಾದ ಹಜರತ್ ಅಲಿಯವರು ನಾಲ್ಕನೆಯ ಖಲೀಫರಾಗಿ ಆಯ್ಕೆ-ಗೊಂಡಾಗ ವಿದ್ರೋಹದ ಕಿಡಿ ಹೊತ್ತಿಕೊಂಡಿತು. ಪ್ರಾಂತಾಧಿಕಾರಿಯಾದ **ಮುಆವಿಯಾ,** ಅಲಿಯವರು ಖಲೀಫರೆಂಬುದನ್ನು ಒಪ್ಪಿಕೊಳ್ಳದೆ ಪ್ರತಿಭಟಿಸಿದ; ಹಜರತ ಅಲಿಯವರು ಕಾಲವಶರಾದ ಮೇಲೆ 'ಖಲೀಫ' ಪಟ್ಟವನ್ನು ಬಲಾತ್ಕಾರ ವಾಗಿ ಆಕ್ರಮಿಸಿದ. ತನ್ನ ತರುವಾಯ ತನ್ನ ಮಗ **ಯಜೀದನೇ** 'ಖಲೀಫ'ನೆಂದು ಘೋಷಿಸಿದ.

ಜನಸಾಮಾನ್ಯರಿಗೆ ಮಾತ್ರ ಇದು ಬೇಕಿರಲಿಲ್ಲ. ಅವರು ಮಹಮ್ಮದ ಪೈಗಂಬರರ ಮಗಳ ಅರ್ಥಾತ್ ಹಜರತ ಅಲಿಯವರ ಹಿರಿಯ ಮಗನಾದ ಇಮಾಮ ಹಸನ್‌ರನ್ನು 'ಖಲೀಫ'ರನ್ನಾಗಿಸಲು ಯತ್ನಿಸಹತ್ತಿದರು. ಆದರೆ ಧರ್ಮದ ಹೆಸರಿನಲ್ಲಿ ಇಲ್ಲದ ವಿರಸ-ಸಂಘರ್ಷ ಸಲ್ಲದೆನ್ನುವ ಸಾಧು ಸ್ವಭಾವದ ಇಮಾಮ ಹಸನ್‌ರು ಖಲೀಫರಾಗಲು ನಿರಾಕರಿಸಿದರು. ಮುಂದೆ ಧೂರ್ತ ಯಜೀದನ ಕುತಂತ್ರದ ಫಲವಾಗಿ ವಿಷಪ್ರಾಶನದ ಮೂಲಕ ಮರಣಕ್ಕೀಡಾದರು. ಆಗ ಜನರು ಅವರ ತಮ್ಮಂದಿರಾದ ಇಮಾಮ ಹುಸೇನರಿಗೆ ಪಟ್ಟ ಕಟ್ಟಬಯಸಿದರು. ಯಜೀದನ ಧರ್ಮದ್ರೋಹ-ದಬ್ಬಾಳಿಕೆಗಳನ್ನು ಪ್ರತಿಭಟಿಸಲು ಇಮಾಮ ಹುಸೇನರೂ ಕಟಿಬದ್ಧರಾದರು. ಹೀಗೆ ಇಸ್ಲಾಮದ ಇತಿಹಾಸದಲ್ಲಿ-ಅಂತಃಕಲಹ ಆರಂಭವಾಯಿತು! ನ್ಯಾಯ-ಅನ್ಯಾಯಗಳ ನಡುವೆ, ಧರ್ಮ ದಬ್ಬಾಳಿಕೆಗಳ ಮಧ್ಯೆ ಸಂಘರ್ಷ ಉಂಟಾಯಿತು. ಕ್ರಾಂತಿ ಮಸೆದಿತು.

ಹಜರತ ಇಮಾಮ ಹುಸೇನರು ತಮ್ಮ ನಂಬಿಗೆಯ ಕೇವಲ ೭೨ ಜನ ಅನುಯಾಯಿಗಳೊಡನೆ ದುಷ್ಟ ಯಜೀದನ ಬಲಿಷ್ಠ ಸೈನ್ಯವನ್ನು 'ಕರ್ಬಲಾ'ದ ಮೈದಾನದಲ್ಲಿ ಎದುರಿಸಿದರು. ನ್ಯಾಯ-ನಿಷ್ಠುರರಾಗಿ ಹೋರಾಡಿ ಪ್ರಾಣಾರ್ಪಣೆ ಮಾಡಿದರು. ಈ ಅವರ 'ಆತ್ಮ ಬಲಿದಾನ' ಮೊಹರಂ ತಿಂಗಳ ಹತ್ತನೆಯ ದಿನ ನಡೆದಿತು!

ಇಂಥ 'ಧರ್ಮದುರಂತ'ದ್ವಕಥೆ. ಹುತಾತ್ಮ ಇಮಾಮ ಹುಸೇನರ ಆತ್ಮ ಬಲಿದಾನದ ಆದರ್ಶ-ಜನಮನದಲ್ಲಿ ಹಸಿರಾಗಿ ಉಳಿಯುವಂತೆ ಮಾಡಿದ ಒಂದು ಪ್ರಯತ್ನವೇ 'ಮೊಹರಂ'ದ ಆಚರಣೆ. ಆದರೆ ಕಾಲಾಂತರದಲ್ಲಿ ಈ ಆಚರಣೆ-ನಮ್ಮ ಹಳ್ಳಿ-ನಗರಗಳಲ್ಲಿ-ತನ್ನ ದುರಂತದ ಛಾಯೆಯನ್ನು ಕಳೆದುಕೊಂಡು 'ಹಬ್ಬ'ವಾಗಿ ಮಾರ್ಪಟ್ಟಿದೆ; ಮಾತ್ರವಲ್ಲ, ಮತ-ಸಂಥದ ಕಟ್ಟು ಮೀರಿ, ಹಿಂದು-ಮುಸ್ಲಿಮ್ ಮಧುರ ಬಾಂಧವ್ಯದ ಭದ್ರ ಬುನಾದಿಯಾಗಿ ಪರಿಣಮಿಸಿದೆ.

೩

ಈ ಮೊಹರಂ ಹಬ್ಬದ ಕಾಲದಲ್ಲಿ ಹಳ್ಳಿಯ ಉತ್ಸಾಹೀ ಯುವಕರು ಹುತಾತ್ಮರಾದ ಇಮಾಮ ಹುಸೇನರೊಡನೆ 'ಕರ್ಬಲಾ'ದ ಕದನದಲ್ಲಿ ಆತ್ಮಾರ್ಪಣೆ ಮಾಡಿದ ವೀರ ತಂಡದ ಸಂಕೇತವಾಗಿ 'ಕರ್ಬಲಾ' ಮೇಳಗಳನ್ನು ಕಟ್ಟುವರು. ಮುಸ್ಲಿಮ್‌ರು ಮಾತ್ರವಲ್ಲ ವೀರಶೈವದಿಂದ ಮೊದಲು ಮಾಡಿ ಹರಿಜನರ ವರೆಗಿನ ಹಿಂದೂ ಸಮಾಜದವರೂ ಇವುಗಳಲ್ಲಿ ಪಾಲುಗೊಳ್ಳುವರು, ಶಿಸ್ತಿನ ಸಮ ವಸ್ತ್ರಧಾರಿಗಳಾಗಿ, ರಣಹಲಗೆಯ ಧ್ವನಿಯೊಡನೆ ಲೋಕನೃತ್ಯದ ಗತಿಯಲ್ಲಿ ಹೆಜ್ಜೆ

ಹಾಕುತ್ತ, ಹಾಡುತ್ತಾ, ಮನೆಯಿಂದ ಮನೆಗೆ ಊರೆಲ್ಲಾ ಸುತ್ತುವರು. 'ಮೊಹರಂ'-ದ ಪವಿತ್ರ ಸಂದೇಶವನ್ನು ಮನ-ಮನಕ್ಕೂ ಮುಟ್ಟಿಸುವರು. ಮೊಹರಂ ತಿಂಗಳ ಒಂಬತ್ತನೆಯ ರಾತ್ರಿ-ಖತ್ತಲ ರಾತ್ರಿ-ಹುತಾತ್ಮ ಹಜರತ ಇಮಾಮ ಹುಸೇನ ಮೊದಲಾದವರ ಸ್ಮಾರಕವೆನಿಸಿದ ಡೋಲಿ ಅಥವಾ ತಾಝಿಯಾಗಳು ಒಂದೆಡೆ ಸೇರಿದಲ್ಲಿ, 'ಕರ್ಬಲಾ'ದ ವಿವಿಧ ಮೇಳದವರು 'ಮೊಹರಂ' ಅಥವಾ 'ಕರ್ಬಲಾ'ಕ್ಕೆ ಸಂಬಂಧಿಸಿದ ಪದಗಳನ್ನು ಬೆಳ್ಳಬೆಳತನಕ ಹಾಡುವರು.

ಈ ಕರ್ಬಲಾ ಪದಗಳನ್ನು ತ್ರಿವಿಧವಾಗಿ ವಿಂಗಡಿಸಬಹುದಾಗಿದೆ: ಒಂದು, ಕರ್ಬಲಾ ಕಥಾನಕಗಳು; ಎರಡು, ಪವಾಡ ಕಥಾನಕಗಳು; ಮೂರು, ಇತರ ಕಥಾನಕಗಳು.

೪

'ಕರ್ಬಲಾ ಕಥಾನಕ'ಗಳಿಗೆ 'ಕರ್ಬಲಾ'ದ ಕದನವೇ ಮೂಲಸೆಲೆ-ಯಾಗಿದೆ. ಆ ಕದನದಲ್ಲಿ ಪಾಲುಗೊಂಡು ಆತ್ಮಾರ್ಪಣೆ ಮಾಡಿದ ಧರ್ಮವೀರರ ಸಾಹಸ-ಸಂಕಟ, ಸಾವು-ನೋವುಗಳೇ ಇವುಗಳ ಪ್ರೇರಣಾಸ್ರೋತಗಳಾಗಿವೆ. ಅಂದಿನ ಆ ಧರ್ಮಯುದ್ಧದಲ್ಲಿ ಅಗ್ರಣಿಗಳಾಗಿ ಆತ್ಮ ಬಲಿದಾನಕ್ಕೆ ಮುಂದಾದ ಹಜರತ ಇಮಾಮ ಹುಸೇನರ ಹೋರಾಟದ ಚಿತ್ರವನ್ನು ನಮ್ಮ ಜಾನಪದ ಕವಿ-ಯೊಬ್ಬ ಹೇಗೆ ರೇಖಿಸಿದ್ದಾನೆಂಬುದನ್ನು ನೋಡಬಹುದು:

"ಲಡಾಯಿ ತಯ್ಯಾರಾ ಆದಾರ ಒಂಟೆ ಮ್ಯಾಲೆ ಸ್ವಾರಾ।
ಹೊಂಟ ನಿಂತಾರೊ ಕರ್ಬಲಾ ಭೂಮಿಗೆ ಬಂಧು ಬಳಗ ಪೂರಾ॥
ಆರ್‍ಯಾಣದಾಗವರಾ ಕಾಣದ ಮೂರ ದಿವಸ ನೀರಾ।
ಕುಡದಾರೊ ಕಣ್ಣೀರಾ ಮಕ್ಕಳು ಹುಡುಗರು ಹೆಂಗಸರಾ॥
ಜಂಗ-ಎದರಾ ಬದರಾ ವೈರಿಯ ಮೋಸಕ ಜಯಕಾರಾ।
ಶರಣ ಹೋಗದವರಾ ಸ್ವರ್ಗಕ್ಕೆ ಹೋದಾರೊ ಹಜರತರಾ॥

(ಜಂಗ-ಯುದ್ಧ)

ಯಾವುದೇ ಬಗೆಯ ಬಣ್ಣ-ಬೆಡಗಿಲ್ಲದ ಸಹಜ ಸುಂದರ ರೀತಿಯಲ್ಲಿ ಧರ್ಮವೀರರು ಹುತಾತ್ಮರಾದ ಬಗೆಯನ್ನು ನಮ್ಮ ಜಾನಪದ ಕವಿ ಚಿತ್ರಿಸಿ, ಅವರಂತೆ

"ಧರವುಕ ಸತ್ತವರೂ ಸಿಗತಾರ್ ಕೋಟಿಗೊಬ್ಬ ಜನರೂ"
ಎಂದು ಭಾವೋಜ್ವಲವಾಗಿ ಬಣ್ಣಿಸಿದ್ದಾನೆ.

ಅಂದಿನ ಯುದ್ಧದಲ್ಲಿ ರಣಭೂಮಿಯಲ್ಲಿ–ಜರುಗಿದ ಹಲವೊಂದು ಹೃದಯಸ್ಪರ್ಶಿ ಪ್ರಸಂಗಗಳನ್ನೂ ಕರುಣಾಜನಕ ಸನ್ನಿವೇಶಗಳನ್ನೂ ನಮ್ಮ ಕವಿಗಳು ಕಣ್ಣಿಗೆ ಕಟ್ಟುವಂತೆ ಕಂಡರಿಸಿದ್ದೂ ಉಂಟು. ಹಜರತ ಇಮಾಮ ಹುಸೇನರ ಮೃತ ಅಣ್ಣಂದಿರಾದ ಹಜರತ ಇಮಾಮ ಹಸನರ ಹದಿನಾರರ ಹರೆಯದ ವೀರ ಕಾಶೀಮನ ಕತೆ ಅಂತಹವುಗಳಲ್ಲಿ ಒಂದು.

ಯುದ್ಧದ ಕಾವು ಏರಿದೆ. ವೀರ ಅಭಿಮನ್ಯುವಿನಂತೆ ವೀರ ಕಾಶೀಮ ಯುದ್ಧಕ್ಕೆ ಸನ್ನದ್ಧನಾಗಿದ್ದಾನೆ. ಇಂಥ ಸಮಯದಲ್ಲಿ ಹಜರತ ಇಮಾಮ ಹುಸೇನರು ತಮ್ಮ ಅಣ್ಣನಿಗೆ ಕೊಟ್ಟ ವಚನದ ಪರಿಪಾಲನೆಗಾಗಿ ವೀರ ಕಾಶೀಮನಿಗೆ ತಮ್ಮ ಮಗಳು ಸಕೀನಾ ಬಾನೂಳನ್ನು ಕೊಟ್ಟು ಮದುವೆ ಮಾಡಬಯಸುತ್ತಾರೆ. ದಿವಂಗತ ಪಿ. ಧೂಲಾ ಸಾಹೇಬರು ಬಣ್ಣಿಸಿದಂತೆ,

"ರಣವೆ ಹಂದರ ಭಲ್ಲೆಯೇ ಕಠಾರಿ
ರಣಗರ್ಜನೆಯೇ ವಾದ್ಯ ಘೋಷ ಭೇರಿ"

ಯಾಗಿ ಮದುವೆ ನೆರವೇರುತ್ತದೆ.

ಅದೇನೋ ಸರಿಯೆ. ಆದರೆ ವೀರ ಕಾಶೀಮನ ಮನಸ್ಸಿನ ಸಂಕಟಕ್ಕೆ ಇತಿ-ಮಿತಿ ಇಲ್ಲದಂತಾಗುತ್ತದೆ. ಅತ್ತ ಯುದ್ಧ ಇತ್ತ ಪ್ರಿಯಪತ್ನಿ! ಆ ಕಡೆ ಕರ್ತವ್ಯದ ಕರೆ, ಈ ಕಡೆ ಪ್ರೇಮದ ಮೊರೆ! ಇಂಥ ಇರುಕಿನಲ್ಲಿ, ಧರ್ಮಸಂಕಟದಲ್ಲಿ ಸಿಲುಕಿದ ಆತ ತನ್ನ ಪ್ರಿಯ ಪತ್ನಿಯನ್ನು ಸಂತೈಸಿ, ಕರ್ತವ್ಯದ ಕರೆಗೆ ಓಗೊಟ್ಟು, ಬೀಳ್ಕೊಳ್ಳುವ ಪ್ರಸಂಗವನ್ನು ನಮ್ಮ ಹಿರಿಯ ಜಾನಪದ ಕವಿ ಪಿ. ಧೂಲಾ ಅವರು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಇದೇ ಮಾಲಿಕೆಗೆ ಸೇರುವ "ಶಹರ್ ಬಾನೂವಿನ ಪ್ರಲಾಪ"ದಲ್ಲಿ ಕರುಣರಸ ಮಡುಗಟ್ಟಿ ನಿಂತಿದೆ. ಶಹರ್‌ಬಾನೂ ಧರ್ಮವೀರ ಹಜರತ್ ಇಮಾಮ ಹುಸೇನರ ಪತ್ನಿ. ರಣಭೂಮಿಯಲ್ಲಿ ಇವರ ಪರಿವಾರ ಬೀಡುಬಿಟ್ಟಾಗ ಇವರಿಗೆ ಹನಿ ನೀರೂ ಸಿಗದಂತೆ ಶತ್ರುಗಳು ಮಾಡುತ್ತಾರೆ. ಪರಿಸರದಲ್ಲಿಯ ಜಲಾಶಯಗಳಲ್ಲೆಲ್ಲ ವಿಷ ಬೆರೆಸಿಬಿಡುತ್ತಾರೆ. ಅದೆಷ್ಟೋ ವೀರ ಸಿಪಾಯಿಗಳು ಬಾಯಾರಿಕೆಯಿಂದಲೇ ಮೃತರಾಗಿರುತ್ತಾರೆ. ಅವರ ಒಂದು ವರುಷ ವಯಸ್ಸಿನ ಹಾಲುಕಂದ ಅಲಿಅಸಗರ್ ನೀರಿಗಾಗಿ ಚಡಪಡಿಸುತ್ತಾನೆ. ತಾಯಿಯ ಮೊಲೆ ಹಾಲು ಕುಡಿಯ

ಬಯಸಿದರೆ ಅಲ್ಲಿ ಏನೂ ದೊರೆಯುವದಿಲ್ಲ. ಹಾಲು ಬತ್ತಿದ ಮೊಲೆ ಚೀಪಿ ಚೀಪಿ ವಿಲಿ ವಿಲಿ ಒದ್ದಾಡುತ್ತಿರುವಾಗ, ತಾಯಿ-ತಂದೆ ಇಬ್ಬರೂ ಮುದ್ದು ಮಾಡಿ ಸಮಾಧಾನ ಪಡಿಸಲು ಪ್ರಯತ್ನಿಸುತ್ತಿರುವಾಗಲೇ ಒಂದು ದುರಂತ ನಡೆಯುತ್ತದೆ.

"ಹಿಂದ ಬಂದ ದುಷ್ಟರು ಹೊಡೆದಾರೊ ತೀರಾ*|
ಆದಿತ್ತೊ ಅಸಗರನ ಹಣಿ ಬಳಗ ಪಾರಾ||"

(*ತೀರಾ-ಬಾಣ)

ಆದನ್ನು ಕಂಡು ತಾಯಿಯ ಕಣ್ಣಿಗೆ ಕತ್ತಲೆ ಕವಿಯುತ್ತದೆ. ಕರುಳು ಕತ್ತರಿಸಿದಂತಾಗುತ್ತದೆ. ದುಃಖ ಕಟ್ಟೊಡೆದು ನುಗ್ಗಿ ಬರುತ್ತದೆ. ಆಗ ಆಕೆ ಹಾಡಿ ಹಾಡಿಕೊಂಡು ಅತ್ತು ಹೀಗೆ ಎದೆ ಹಗುರ ಮಾಡಿಕೊಳ್ಳುತ್ತಾಳೆ:

"ಬಾನೂ ಅಳುವೂಳೊ ಇನ್ನ ಹ್ಯಾಂಗ ಮಾಡಲೆ|
ಬಾಳಾ ಅಸಗರ ಮಡಿದಾ ರಣದಲ್ಲೆ ||ಪ||
ಬಾನೂ ಅಳವುಳೊ ಇನ್ನ ಹ್ಯಾಂಗ ಮಾಡಲೆ|
ಹರಾ ಯನ್ನ ಸಂಸಾರ ಸುಡಲೆ||ಅ.ಪ||

ಕಮಲ ಪುಷ್ಪದ ಯನ್ನ ಅಸಗರ ಬಾಳಾ|
ಹಾಲಿಲ್ಲದೆ ಬಳಲುವ ಆ ಮುತ್ತಿನ ಹವಳಾ||
ನೀಲವರ್ಣದ ಕುಭಗಳು ಮೇಲೆ ಮುಖದಲ್ಲೆ|
ದಬ್ಬಿ-ಲೊಲ್ಯಾಡಿ ಅಳು ತೊಡೆಯ ಮ್ಯಾಲೆ||

ಸುಂದ್ರ ಸಾಗರ ದೇವಿಂದ್ರ ಸಭೆಕ|
ವಪ್ಪುವ ದೊರಿ ಯನ್ನ ಚಂದ್ರನ ಬೆಳಕ||
ಮರಿ ಮಾಡಿ ಮಾಯಕ ದೊರಿ ಯನ್ನ ಪೋಗುವಾ|
ಕರುಣೆಲ್ಲೊ ಪ್ರಭು ನಿನ್ನಲ್ಲೆ||
.... ... .... .... .... .... ... ....
.... .... .... ... .... .... .... ....
ಕೆಡವಿ ಹೊಂಟೆಲ್ಲೊ ಖಾಲಿ ತೋಳಿಲ್ಲಾ|
ಪಟ್ಟದರಸ ಹುಟ್ಟ ಆದ್ಯೊ ಮಣ್ಣಿನ ಪಾಲಾ||
ಸೂರ್ಯ-ಚಂದ್ರರು ನಿಂದ್ರಲಾರದೆ ತಾಪಕ|
ಮರಿಯಾದರೊ ಮಹರಾಮರ ಮರಗುತಲೆ||"

ಮಗುವನ್ನು ವರ್ಣಿಸುವ 'ಕಮಲ ಪುಷ್ಪ' 'ಮುತ್ತಿನ ಹವಳ' ಎಂಬ ಮಾತುಗಳಲ್ಲಿಯ ವಾತ್ಸಲ್ಯದ ಮಿಂಚು ಪ್ರಾದೇಶಿಕ ಉಪಮಾನಗಳ ಕಂಚು ನಮ್ಮ ಹೃನ್ಮನಗಳನ್ನು ಸೆರೆಹಿಡಿಯುತ್ತವೆ. ಉದ್ದಕ್ಕೂ ಹರಿದಿರುವ ಕರುಣ ರಸವಂತೂ ನಮ್ಮ ಎದೆಯನ್ನು ಕರಗಿಸುತ್ತದೆ. ಇನ್ನೊಬ್ಬ ಜಾನಪದ ಕವಿ ಈ ತಾಯಿಯ ಹೃದಯ ವ್ಯಥೆಯನ್ನು ಹೀಗೆ ಬಣ್ಣಿಸಿದ್ದಾನೆ:

"ಕುಸುಬಿ ಹೂವಿನಂಥ ನನ್ನ ಮಗನ|
ಆರ್‍ಯಾಣದೊಳಗಿತ್ತೊ ನಿನ್ನ-ಮರಣ||"

ಇಲ್ಲಿಯ ಭಾಷೆಯ ಬಣ್ಣ-ಬೆಡಗಕ್ಕೆಲ್ಲ ಕನ್ನಡ ಸಂಸ್ಕೃತಿಯೇ ಸತ್ವವನ್ನೊದಗಿಸಿದೆ ಎಂಬುದು ಗಮನಾರ್ಹ ಅಂಶವಾಗಿದೆ.

೫

'ಕರ್ಬಲಾ ಕಥಾನಕ'ಗಳು ಕರ್ಬಲಾ ಕವನದ ವ್ಯಕ್ತಿ-ಸಂಗತಿಗಳ ಕುರಿತಾದ ಐತಿಹಾಸಿಕ ಕಥಾನಕಗಳಾಗಿದ್ದರೆ, 'ಪವಾಡ ಕಥಾನಕ'ಗಳು ಇಸ್ಲಾಂ ಮತದ ಮಹಾಪುರುಷರ ಹಾಗೂ ಜೀವನ ಮೌಲ್ಯಗಳ ಸುತ್ತುಹೆಣೆಯಲ್ಪಟ್ಟ ಪವಾಡಗಳಾಗಿವೆ.

ಈ ಪವಾಡಗಳ ಬಗ್ಗೆ ಒಂದು ಮಾತು:

ಇಸ್ಲಾಂ ಮತಸ್ಥಾಪಕ ಮಹಮ್ಮದ ಪೈಗಂಬರರು ಜನರು ಕಣ್ಣಾರೆ ಕಂಡು ನಿಬ್ಬೆರಗಾಗುವಂಥ ಯಾವ 'ಪವಾಡ'ವನ್ನೂ, ಅಂದರೆ ಅತಿಮಾನುಷ ಕೃತ್ಯವನ್ನೂ ಮಾಡಿಲ್ಲವೆಂದು ಇತಿಹಾಸ ತಿಳಿಸುತ್ತದೆ. ಆದರೆ ಅಪವಾದವೆಂಬಂತೆ ಒಂದೇ ಒಂದು 'ಅಲೌಕಿಕ ಘಟನೆ' ಅವರ ಜೀವನದಲ್ಲಿ ಜರುಗಿದ ಬಗ್ಗೆ ದಾಖಲೆಗಳಿವೆ. ಪರಮಾತ್ಮನ ಆದೇಶದಂತೆ ದೇವದೂತ ಜಿಬ್ರಾಯೀಲ್ ಒಮ್ಮೆ ಅವರ ಹತ್ತಿರ ಬರುತ್ತಾನೆ. ಜತೆಯಲ್ಲಿ ಕುದುರೆಯ ದೇಹ, ಮನುಷ್ಯನ ಮುಖವುಳ್ಳ 'ಬುರಾಖ್' ಎಂಬ ದಿವ್ಯಜೀವಿಯನ್ನು ತರುತ್ತಾನೆ. ಮಹಮ್ಮದ ಪೈಗಂಬರರು ಅದನ್ನೇರಿ ಆಕಾಶ ಲೋಕಕ್ಕೆ ಹಾರಿ ಪರಮಾತ್ಮನ ಸನ್ನಿಧಿಯನ್ನು ಸೇರಿ, ಬೆಳಕೇ ಬೆಳಕಾದ 'ಅಲ್ಲಾ'ನೊಡನೆ ಮಾತನಾಡಿ ಕೃತಾರ್ಥರಾಗಿ ಭೂಲೋಕಕ್ಕೆ ಮರಳಿ ಬರುತ್ತಾರೆ. ಈ ದೇವಲೋಕದ ಪ್ರಯಾಣವನ್ನು ಅವರು ದೇಹಸಹಿತವಾಗಿಯೇ ಮಾಡಿದರೆಂದು ಕೆಲವರು ಭಾವಿಸಿದರೆ, ಆತ್ಮ ಸ್ವರೂಪಿಯಾಗಿ ಮಾಡಿದರೆಂದು ಇತರರು ವಿವರಿಸುತ್ತಾರೆ. ಅಂತೂ ಈ ಪವಾಡ ಸದೃಶ ಘಟನೆ ಅವರ ಬದುಕಿನಲ್ಲಿ ನಡೆದುದನ್ನು ಮುಸ್ಲಿಮರೆಲ್ಲರೂ ನಂಬುತ್ತಾರೆ. ಮಹಮ್ಮದ ಪೈಗಂಬರರ ಈ

ಆಕಾಶ-ಉಡ್ಡಾಣವನ್ನು 'ಮೈರಾಜ'ವೆಂದು ಕರೆಯಲಾಗುತ್ತದೆ. ಆ ಕುರಿತ ಒಂದು ಸರಳ ಕಥಾನಕ ಇದೆ.

ಕರ್ಬಲ ಪದಗಳಲ್ಲಿ ಪಡಿಮೂಡಿರುವ ಇತರ ಪವಾಡಗಳ ಬಗ್ಗೆ ವಿಶೇಷವಾದ ಜಿಜ್ಞಾಸೆ ನಡೆಯಬೇಕಾಗಿದೆ. ಏಕೆಂದರೆ ಇಲ್ಲಿಯ ಕಥಾವಸ್ತುವಿಗೂ ಹಿಂದೂ ಪುರಾಣ ಪ್ರಸಿದ್ಧ ಕಥಾವಸ್ತುಗಳಿಗೂ ದಟ್ಟವಾದ ಹೋಲಿಕೆ ಕಂಡು-ಬರುತ್ತದೆ. ಇಲ್ಲಿಯ ಪವಾಡಗಳಲ್ಲಿ ಪಡಿಮೂಡಿರುವ ಕೆಲವು ಘಟನೆಗಳು ನೈಜವಾದುವೆಂದು ಸಾಮಾನ್ಯ ಮುಸ್ಲಿಮರು ನಂಬಿದರೆ, ಅವು ಕಟ್ಟು ಕಥೆಗಳೆಂದು ಇತರ ಕೆಲವರು ವಿಚಾರವಂತರು ವಾದಿಸುತ್ತಾರೆ. ಮೊದಲನೆಯದಾಗಿ ಇಸ್ಲಾಂ ಧರ್ಮ ತತ್ವದ ಮೇರೆಗೆ ಪರಮಾತ್ಮನಾಗಲಿ, ದೇವದೂತರಾಗಲಿ(ಜಿಬ್ರಾಯಿಲ್, ಇಜ್ರಾಯೀಲ್ ಮುಂತಾದವರು) ಯಾವುದೇ ಜೀವಿಯ ರೂಪದಲ್ಲಿ, ಸಾಕಾರ ಸ್ವರೂಪಿಗಳಾಗಿ ಕಾಣಿಸಿಕೊಳ್ಳುವದಿಲ್ಲ. ಅಂದ ಮೇಲೆ ಹಾಗೆ ಕಾಣಿಸಿಕೊಂಡು ಅವರು ಪವಾಡ ಮಾಡುವದು ಸಾಧ್ಯವಿಲ್ಲ. ಎರಡನೆಯದಾಗಿ, ಮುಹಮ್ಮದ ಪೈಗಂಬರರೇ ಆಗಲಿ, ಇತರ ಯಾವದೇ ಮುಸ್ಲಿಮ ಮಹಾಪುರುಷರೇ ಆಗಲಿ, ಅವರು 'ಮಾನವ ಮಾತ್ರ'ರೇ ಆಗಿದ್ದಾರೆ. ಮುಹಮ್ಮದ ಪೈಗಂಬರರೇ ಈ ಮಾತನ್ನು ತಮ್ಮ ಜೀವಮಾನದ ಕಾಲದಲ್ಲಿ ಪದೇ ಪದೇ ಒತ್ತಿ ಹೇಳಿದ್ದಾರೆ. ಪವಿತ್ರ ಗ್ರಂಥ 'ಕುರಾನ' ದಲ್ಲಿಯೂ ಅದಕ್ಕೆ ಆಧಾರವಿದೆ. ಹೀಗಿರುವಾಗ ಇಂಥವ-ರಿಂದಲೂ 'ಪವಾಡ' ಮಾಡುವದು ಸಾಧ್ಯವಿಲ್ಲ. ವಸ್ತುಸ್ಥಿತಿ ಹೀಗಿರುವಾಗ, ಕರ್ಬಲಾ ಪದಗಳಲ್ಲಿ ಕಾಣಿಸಿಕೊಂಡ ಪವಾಡಗಳು ಮುಸ್ಲಿಂ ಪರಂಪರೆಯಿಂದ ಬಂದವುಗಳಲ್ಲವೆಂದೇ ಹೇಳಬೇಕಾಗುತ್ತದೆ. ಅಂದ ಮೇಲೆ ಇವು ಹಿಂದೂ ಧರ್ಮದ ಪ್ರಭಾವದಿಂದಾಗಿಯೇ ಸೃಷ್ಟಿಗೊಂಡಂತೆ ಕಂಡು ಬರುತ್ತವೆ. ಬಹುಶಃ ಮಹಾಪುರುಷರ ಮಹತ್ವದ ಲಕ್ಷಣಗಳಲ್ಲಿ ಪವಾಡವೂ ಒಂದೆಂದು ಭಾವಿಸಿದ ಭಾರತೀಯ ಸಂಸ್ಕೃತಿಯಲ್ಲಿ ಮಿಂದೆದ್ದ ಮನ ಇವುಗಳನ್ನು ಸೃಷ್ಟಿಸಿರಬಹುದಾಗಿದೆ. ಇಂಥ ನಾಲ್ಕು ಪವಾಡಗಳನ್ನು ನೋಡಬಹುದಾಗಿದೆ.

೬

'ಬೀಬಿ ಫಾತಿಮಾಳ ಭಕ್ತಿ ಪರೀಕ್ಷೆ'ಯ ಒಂದು ಪವಾಡ ಅತ್ಯಂತ ಮಹತ್ವದ್ದಾಗಿದೆ. 'ಸಿರಿಯಾಳ ಸೆಟ್ಟಿ'ಯ ಕತೆಯಿಂದ ಈ ಪವಾಡ ಪ್ರಭಾವಿತ-ವಾದಂತಿದೆ:

"ಮೈರಾಜ ಬಿಟ್ಟು ಬಂದಾನೊ ಮಾದೇವ ಮೌಲಾ ನಂತ್ಯಾಕ|
ಕೈ ಒಡ್ಡಿ ಭಿಕ್ಷಾ ಬೇಡುದಕ| ಭವರೂಪ ತೋರುದಕ|
ಬಂದಾನೊ ಬಾಗಿಲಕ||"

ಹೀಗೆ ಮಾದೇವನು ಮೌಲಾಲಿಯ ಅಂದರೆ ನಾಲ್ಕನೆಯ ಖಲೀಫರೂ, ಮುಹಮ್ಮದ ಪೈಗಂಬರರ ಅಳಿಯಂದಿರೂ ಆದ ಹಜರತ ಅಲಿಯ ಮನೆಗೆ ಭಿಕ್ಷೆಗೆ ಬರುತ್ತಾನೆ. ಆಗ ಅವರ ಪತ್ನಿ ಬೀಬಿ ಫಾತಿಮಾ, ಬಾವಾನ (ಫಕೀರನ) ರೂಪ-ದಲ್ಲಿ ಬಂದ ದೇವರನ್ನು ಮುಂದೆ ಕಡೆದು 'ಏನು ಬೇಕೆ'ಂದು ಕೇಳುತ್ತಾಳೆ. ಆ ಮಾತಿಗೆ ಆತ ಹೇಳುತ್ತಾನೆ:

"ಹಸುವಾಗಿ ಬಹಳ ಕಸಿಬಿಸಿ ಪಡತೀನಿ ಶಶಿಮುಖಿ ತಿಳಿಮನಕ್ಕ
ಮಾಂಸವು ಬೇಕ ನನ್ನ ಊಟಕ| **ಶಿಶುಪಕ್ಷಿ** ಆದರ ಕಡಕ|
ತುಸು ತಿಳಿಯೆ. ನಿನ್ನ ಮನಕ||"

ಆತನ ಅಪೇಕ್ಷೆಯಂತೆ ಆಕೆ ಕೂಡಲೆ ನಾಲ್ಕು ಮರಿಹಕ್ಕಿಗಳನ್ನು ತರಿಸು-ತ್ತಾಳೆ. ಮತ್ತು,

"ರೆಕ್ಕೆ ಕಿತ್ತು ಚೊಕ್ಕ ಚಿನ್ನ ಮಾಡಿ ಉಪ್ಪುಕಾರ ಅದಕ|
ಬೇಕಾದಷ್ಟು ಮಸಾಲಿ ನಾಜೂಕ| ಹಾಕಿ ಅಡಗಿ ಮಾಡ್ಯಾಳೊ ಕಡಕ|
ಬತ್ತೀಸ್ ಮಸಾಲಿ ಅದಕ||"

ಈ ರೀತಿಯಾಗಿ ಕಷ್ಟಪಟ್ಟು ಭಕ್ತಿಯಿಂದ ಅಡುಗೆ ಮಾಡಿ ಗೌರವಾದ-ರದಿಂದ ಆತನಿಗೆ ದೇವರಮನೆಯಲ್ಲಿ ಊಟಕ್ಕೆ ನೀಡುತ್ತಾಳೆ. ಆದರೆ ಆತ ಅದನ್ನು ಸ್ವೀಕರಿಸದೆ,

"ಕೇವಲ ಮಕ್ಕಳ ಮಾಂಸಕ್ಕ|
ಜೀವ-ನನ್ನು ಹರೂತೈತ್ಯೆ ಅದಕ||"

ಎನ್ನುತ್ತಾನೆ. ಆ ತಾಯಿಗೆ ಸಿಡಿಲು ಎರಗಿದಂತಾಗುತ್ತದೆ-ತನ್ನ ಮಕ್ಕಳ ಬಲಿ ಕೇಳುವ ಆ ಬಾವಾನ ಮಾತು ಕೇಳಿ, ತನ್ನ ಕಂದಮ್ಮಗಳ ಕುತ್ತಿಗೆಯನ್ನು ತಾನೆಂತು ಕೊಯ್ಯಲೆಂದು ಗೋಳಿಡುತ್ತಾಳೆ. ಕೊಟ್ಟ ಮಾತು ನೆನಪಿಗೆ ಬರುತ್ತದೆ.

"ಕೂಸಿನ ಕರೆಸಿ ತೊಡಿಮ್ಯಾಲ ಹಾಕ್ಯಾಳ, ಕುಡುಗೋಲ ಡೆಂತ್ಯಾಕ|
ಕೂಸಿನ ಹ್ಯಾಂಗ ಕೊಯ್ಯಬೇಕ| ಹೆಡಕಿನ ಮ್ಯಾಲಿಟ್ಟಾಳೊ ಬಾಕ|
ದುಡುಕಿ ಬಂತೊ ದುಃಖ||"

ಆಗ ಆ ಕೂಸು, "ವಚನ ಪರಿಪಾಲನೆಗಾಗಿ ತನ್ನ ಗೋಣು ಕೊಯ್ದು ಅಡಿಗೆ ಮಾಡಿ ಬಾವಾನಿಗೆ ಉಣಿಸಿ, ಸ್ವರ್ಗ ಸುಖ ಪಡೆಯಮ್ಮಾ" ಅನ್ನುತ್ತದೆ.

ಆಗ ತಾಯಿ, ದುಃಖವನ್ನು ಹತ್ತಿಕ್ಕಿ. ಕಲ್ಲು ಮನಸ್ಸು ಮಾಡಿ ಕರುಳ ಕುಡಿಗೇ ಚೂರಿ ಹಾಕಿ, ಅಡಿಗೆ ಮಾಡಿ ಬಾವಾನಿಗೆ ಊಟಕ್ಕೆ ಕರೆಯುತ್ತಾಳೆ. ಆಗ ಬಾವಾ ಹೇಳುತ್ತಾನೆ—'ಮಕ್ಕಳಿಲ್ಲದೆ ತಾನು ಊಟ ಮಾಡಲಾರೆ' ಎಂದು. ಅದನ್ನು ಕೇಳಿ ತಾಯಿಗೆ ದುಃಖ ಕೋಪಗಳು ಒಮ್ಮೆಲೇ ಉಕ್ಕಿ ಬರುತ್ತವೆ:

"ಹೇಸಿ ಬಾವಾ ನಿನ್ನ ವೇಾಸಾ ಉರಿಯಲಿ ಹಾಕಿದಿ ಪಾಶಕ|
ಕೂಸಿನ ಕೊಯ್‌ಸಿದಿ ಹಕನಾಕ!"........

ಎಂದು ಗೋಳಿಡುತ್ತಾಳೆ.

ಇಂತಹ ಕುತೂಹಲದ ಘಟ್ಟ ತಲುಪಿದ ಕಥಾನಕ ಒಮ್ಮೆಲೇ ನಿಂತು ಬಿಡುತ್ತದೆ.

ಈ 'ಪವಾಡ'ದ ಮೇಲೆ ಸಿರಿಯಾಳ ಸೆಟ್ಟಿಯ ಕಥೆಯು ದಟ್ಟವಾದ ಪ್ರಭಾವವಿದ್ದುದು ಸ್ವಯಂ ಸ್ಪಷ್ಟವೇ ಆಗಿದೆ. ಆದರೆ ಈ ಕಥಾನಕದ ಪವಾಡ ಒಂದು ಸಂಕೇತವಾಗಿಯೂ ಮಾರ್ಪಟ್ಟಿರುವದು, ಈ ಕರ್ಬಲಾ ಪದ ಸಾಧಿಸಿದ ಒಂದು ಪವಾಡವೇ ಆಗಿದೆ. ಮೊಹರಂ ಹಬ್ಬದ 'ಧರ್ಮ ದುರಂತ'ವೇ ಇಲ್ಲಿ ಪ್ರತಿಮಿತವಾಗಿದೆ. ಬೀಬಿ ಫಾತಿಮಾ ಸತ್ತ ಎಷ್ಟೋ ವರ್ಷದ ನಂತರ ಆಕೆಯ ಮಗ ಹಜರತ ಇಮಾಮ ಹುಸೇನರು ತಮ್ಮ ಪ್ರೌಢ ವಯಸ್ಸಿನಲ್ಲಿ ಪರಮಾತ್ಮನಿಂದ ಆದೇಶಿತವಾದ ಧರ್ಮದ ಸಿದ್ಧಾಂತದ ರಕ್ಷಣೆಗಾಗಿ ಆತ್ಮ ಬಲಿದಾನ ಮಾಡಿದರು, ಎಂಬುದು ವಸ್ತು ಸತ್ಯವಾದರೂ, ಅದು ಇಲ್ಲಿ ಸಾಂಕೇತಿಕವಾಗಿ ಮೂಡಿ ಬಂದಿದೆ.

ಎರಡನೆಯದಾದ 'ಮೌಲಾಲಿಯ ಕಥಾನಕ'ಕ್ಕೆ ಭೀಮನ ಗರ್ವಭಂಗವನ್ನು ಮಾಗುತಿ ಮಾಡಿದ ಕತೆಯು ಪ್ರೇರಣೆ ದೊರೆತಂತಿದೆ:

"ಹಮ್ಮ ಬಂದೀತೊ ಮೌಲಾಗ ಘನ ತೋಲಾ|
ಮದಾಯೇರಿದ ಮದ್ದಾನಿಗಿಂತ ಮಿಗಿಲಾ||
ಭೂಮಿಗಿ ಕಿತ್ತ ವಗೂತೀನಿ ದರಜಿಲ್ಲಾ|
ಹಂಕಾರ ಗುಣಾ ಮನಸ್ಯಾಗ ಚೊಲೋದಲ್ಲಾ||"

'ಸಿವ'ನ ಮನಸ್ಸಿಗೆ ಮೌಲಾಲಿಯ ಈ ಅಹಂಕಾರ ಮೆಚ್ಚಿಕೆಯಾಗುವದಿಲ್ಲ. ಆದ್ದರಿಂದ ಆತ ತನ್ನ ದೂತ 'ಜಿಬರಾಯೀಲ್'ನನ್ನು ಗರ್ವಭಂಗಕ್ಕಾಗಿ ಕಳಿಸುತ್ತಾನೆ. ದೇವದೂತನಾದ ಜಿಬರಾಯಿಲ್ ಒಬ್ಬ ಮುದುಕಿಯ ರೂಪ ತಾಳಿ,

ಗಳ ಹಣ್ಣು ತುಂಬಿದ ಬುಟ್ಟಿ ಹೊತ್ತುಕೊಂಡು, ಕೋಲೂರುತ್ತ ಹೆಜ್ಜೆ ಹಾಕುತ್ತ ಬಂದು ರಾಜಬೀದಿಯ ಬಾಜಾರದಲ್ಲಿ ಕೂತುಕೊಳ್ಳುತ್ತಾನೆ. ಅಲ್ಲಿಗೆ ಮೌಲಾಲಿ ಬಂದಾಗ,

"ಮುದುಕಿ ಅಂದ್ಲ ಮೌಲಾಗ-ಕಮಾಲಾ|
ಪುಟ್ಟಿ ನೆಗಿವಿಡೊ ನನ್ನ ತೆಲಿ ಮ್ಯಾಲಾ||ಪ||

ಕಸುವಿಲ್ಲಾ ಸೊಲ್ಪಾ| ಹೊರಸೊ ಹಡದಪ್ಪಾ|
ನನ್ನ ಹಾಂಗ ಮುಪ್ಪ ಆಗೀರೆಪ್ಪಾ||

ಆಸೆವಂತ ಆಗೀರು ಈ ಭೂಮಿ ಮ್ಯಾಲಾ|
ಹಿಂಗ ಅನ್ನೋಣಾ ಯೆಡಗೈಲಿಂದ ಮೌಲಾ||

ಸಹಜವಾಗಿ ಇಡಬೇಕಂದ್ರ ಮುದುಕೀ ತಲೀ ಮ್ಯಾಲಾ|
ಯೆತ್ತಾಕ ಹ್ವಾದರ ತುಸು ಆಗಳ್ಯಾಡಲಿಲ್ಲಾ||"

ಆಮೇಲೆ ಮೌಲಾಲಿ ತಮ್ಮ ಭೀಮಶಕ್ತಿಯನ್ನೆಲ್ಲ ಪಣಕ್ಕೆ ಹಚ್ಚಿ ಅದನ್ನು ಎದೆ ಮಟ್ಟವೇನೊ ಎತ್ತುತ್ತಾರೆ. ಆದರೆ ಆ ಮುದುಕಿಗೆ ಅದನ್ನು ಹೊರಸಲು ಅಸಮರ್ಥರಾಗಿ, ದಿಕ್ಕು ತಪ್ಪಿದಂತಾಗಿ, ನೆಲಕ್ಕಿಳಿಸುತ್ತಾರೆ. ಅದನ್ನು ಕಂಡು,

"..........ಮುದುಕೆಂದ್ಲ ಯಾಕ|
ನೆಗೂವಲ್ಲಿ ಮ್ಯಾಕ|
ಗಟ್ಟ್ಯಾಳ್ಯಾಂವ ಕಾಣಸ್ತೀದಿ ಪುಟ್ಟಿ ನೆಗೂಲಿಲ್ಲಾ|
ಇಷ್ಟ ಹೇಳಿ ಪುಟ್ಟಿ ತನ್ನ ತೆಲೀ ಮ್ಯಾಲಾ||
ಹೊತಕೊಂಡು ಹ್ಯಾದಾಳ ಮುದುಕಿ ಅನುಮಾನ ಇಲ್ಲಾ|
ನೋಡಿ ಮೌಲಾನ ಯೆದೀ ಅಂದಿತೊ ಝುಲ್ಲಾ||

ಆದರಿಂದ ಮೌಲಾಲಿ ನಾಚಿಕೆಪಟ್ಟುಕೊಂಡು, ನೊಂದುಕೊಂಡು, ತಮ್ಮ ಮಾವಂದಿರಾದ ಮಹಮ್ಮದ ಪೈಗಂಬರರ ಹತ್ತಿರ ಹೋದಾಗ ಅವರು ಅದರ ರಹಸ್ಯವನ್ನು ಅವರಿಗೆ ವಿವರಿಸುತ್ತಾರೆ.

ಮೌಲಾಲಿಯ ಜೀವನದ ಸುತ್ತ ಈ ಪವಾಡ ಹೆಣೆಯಲ್ಪಡಲು ಏನು ಕಾರಣ ಎಂದು ಯೋಚಿಸಿದಾಗ, ಒಂದು ವಿಷಯ ಹೊಳೆಯುತ್ತದೆ. ಮುಸ್ಲಿಮರ ಪಾಲಿಗೆ ಮೌಲಾಲಿ ಭೀಮನಂತೆಯೇ ಶಕ್ತಿವಂತ. ಹಿಂದೂ ಪೈಲವಾನರಿಗೆ ಭೀಮ-ಹನುಮಂತರಿದ್ದಂತೆ, ಮುಸ್ಲಿಮ ಪೈಲವಾನರಿಗೆ ಮೌಲಾಲಿ! ಬಹುಶಃ ಈ ಹಿನ್ನೆಲೆಯಲ್ಲಿಯೇ ಈ ಪವಾಡ ಸೃಷ್ಟಿಗೊಂಡಿರಬಹುದಾಗಿದೆ.

ಈ ಗುಂಪಿಗೆ ಸೇರುವ ಮೂರನೆಯದಾದ 'ಬೆಳವನ ಪದ'ದ ಮೇಲೆ ಶಿಬಿ ಚಕ್ರವರ್ತಿಯ ಕತೆಯ ಪ್ರಭಾವ ಬಿದ್ದಂತಿದೆ. ಪೈಗಂಬರರ ಸತ್ವ ಪರೀಕ್ಷೆಗಾಗಿ ದೇವದೂತರಿಬ್ಬರು ಬರುತ್ತಾರೆ. ಜೀವಿಗಳ ಪ್ರಾಣಹರಣ ಮಾಡುವ ಯಮನಂತಿರುವ ಇಜರಾಯಿಲ್ ಗಿಡಗನಾದರೆ, ಲೋಕಕ್ಕೆ ದೈವೀಸಂದೇಶ ತರುವ ಜಿಬ್ರಾಯಿಲ್ ಬೆಳವನಾಗುತ್ತಾನೆ. ಬೆನ್ನಟ್ಟಿದ ಗಿಡಗದಿಂದ ತಪ್ಪಿಸಿಕೊಂಡಂತೆ ಬಂದ ಬೆಳವ ಪೈಗಂಬರರಿಗೆ ಶರಣುಹೋಗುತ್ತದೆ. ದಯಾಳು ಪೈಗಂಬರರು ಅದಕ್ಕೆ ಅಭಯದಾನ ಮಾಡುತ್ತಾರೆ. ಆದರೆ ಅಷ್ಟರಲ್ಲಿ ಗಿಡಗ ಆಗಮಿಸಿ ತನ್ನ ಆಹಾರವನ್ನು ತನಗೆ ಒಪ್ಪಿಸಬೇಕು ಅನ್ನುತ್ತದೆ. ಆಗ ಪೈಗಂಬರರು ಆ ಬೆಳವನಿಗೆ ಬದಲಾಗಿ ತಮ್ಮ ತೊಡೆಮಾಂಸ ಕೊಡಲು ಸಿದ್ಧರಾಗುತ್ತಾರೆ. ಆ ಸಮಯದಲ್ಲಿ ಅಲ್ಲಿಯೇ ಹಾಜರಿದ್ದ ಅವರ ಮೊಮ್ಮಕ್ಕಳಾದ ಹಸನ್-ಹುಸೇನರು ಅಜ್ಜನಿಗೆ ಬದಲಾಗಿ ತಮ್ಮ ಮಾಂಸ ಕೊಡಲು ಮುಂದಾಗುತ್ತಾರೆ: ಆಗ ಗಿಡಗ ಹೇಳುತ್ತದೆ.

> "ಗಿಡಗ ಅಲ್ಲ ನಾ ಯಿಜ್ರಾಯೀಲ, ಕಳಿಸ್ಯಾನ ಭಗವಾನ|
> ನಿಮಗ್ ಹತ್ತಲಿಲ್ಲ ನಮ್ಮ ಖೂನ ಕೇಳ್ರಿ ಶರಣ||"

ಆಮೇಲೆ

> "ಬೆಳುವ ನುಡಿದೀತ ಯಿನ್ನ. ನಾ ಜುಬ್ರಾಯೀಲ ಹಿಡೀರಿ ಖೂನ|
> ಇಬ್ಬರು ಕೂಡಿ, ಆಗಿಜೋಡಿ, ಬಂದೀವಿ ನಿಮ್ಮ ಮನ ನೋಡೂಕ||"

ಹೀಗೆ ಕಥಾನಕದಲ್ಲಿ ಶರಣಾರ್ಥಿಗಳಿಗೆ ಅಭಯವಿತ್ತು ರಕ್ಷಿಸುವ ಮುಹಮ್ಮದ ಪೈಗಂಬರರ ಗುಣವಿಶೇಷದ ಘನತೆಯನ್ನು ಕೊಂಡು ಕೊನೆಯಲಾಗಿದೆ.

ಕೊನೆಯದಾದ 'ಚಿಗರಿಯ ಕತೆ' 'ಮಲ್ಲಿಗೆದಂಡೆ' ಎಂಬ ಜಾನಪದ ಸಂಕಲನದಲ್ಲಿ ಪ್ರಕಟವಾಗಿರುವ 'ಆಕಳ ಹಾಡು' ಎಂಬುದರಿಂದ ಪ್ರೇರಣೆ ಪಡೆದಿದೆ. ಆಹಾರಕ್ಕಾಗಿ ಬೇಟೆಯಾಡ ಹೊರಟ ಹುಲಿಗೆ ಒಂದು ಚಿಗರಿ ಸಿಗುತ್ತದೆ. ಆ ಚಿಗರಿಗೆ ತಾನು ಸಾಯುವ ಮುಂಚೆ ಒಮ್ಮೆ ಮಕ್ಕಳ ಮುಖ ನೋಡಿ, ಅವುಗಳಿಗೆ ಮೊಲೆ ಕುಡಿಸಿ ಬರುವ ಆಸೆಯಾಗುತ್ತದೆ. ಅದಕ್ಕಾಗಿ ಅನುಮತಿ ಕೊಡಲು ಹುಲಿರಾಜನಲ್ಲಿ ಮೊರೆಯಿಡುತ್ತದೆ. ಆದರೆ ಹುಲಿ ಚಿಗರಿಯ ಮಾತನ್ನು ನಂಬುವದಿಲ್ಲ. ಅದೇ ಹೊತ್ತಿಗೆ ಸರಿಯಾಗಿ ಅಲ್ಲಿ ಮುಹಮ್ಮದ ಪೈಗಂಬರರು ಆಗಮಿಸುತ್ತಾರೆ. ತಾವು ಜಾಮೀನಾಗಿ. ಚಿಗರಿಗೆ ಹೋಗಿ ಬರಲು ಅವಕಾಶ ಕಲ್ಪಿಸಿ ಕೊಡುತ್ತಾರೆ. ಅದರಂತೆ ಚಿಗರಿ ತನ್ನ ವಾಸಸ್ಥಳಕ್ಕೆ ಮರಳಿ, ಮಕ್ಕಳನ್ನು ಕಂಡು ಹೇಳುತ್ತದೆ:

“ಜಾಮೀನಾಗಿ ಪೈಗಂಬರ ಶರಣಾ|
ನಿಮ್ಮನ್ನ ನೋಡುದಕ ಕಳಿಸ್ಯಾರೊ ನನ್ನ||
ತೀರಿತೊ ರಿಣ| ಹೋಗುವೆ ನಾನಾ|
ಕುಡಿರಿ ಹಾಲನಾ||”

ಹಾಗೆ ವಾತ್ಸಲ್ಯದಿಂದ ಹಾಲನ್ನು ಕುಡಿಸಿ, ಮಾತು ಕೊಟ್ಟಂತೆ ಮರಳಿ ಬರು-ತ್ತದೆ. ಪೈಗಂಬರರು ಅನ್ನುತ್ತಾರೆ:

“ಆಗಿದ್ದೆ ಜಾಮಿನಾ| ತೊಗೋ ಚಿಗರೀನಾ|
ನಿನ್ನ ಸ್ವಾಧೀನಾ! ಮುಟ್ಟಿತೊ ವಚನಾ||”

ಆಗ,

“ಹುಲಿರಾಜ ತಾನಾ| ನೋಡಿ ವಚನಾ|
ಅಲ್ಲಾ ಪ್ರಭುವಿನ| ಮಾಡಿದ ಧ್ಯಾನಾ|
ಪಿಡಿದ ಚರಣಾ| ಮಾಡಿದ ವಂದನಾ|”

ಚಿಗರಿಯ ವಚನ ಪರಿಪಾಲನೆ, ಸತ್ಯವಂತಿಕೆ ಕಂಡು ಹುಲಿಯ ಹೃದಯ ಪರಿ-ವರ್ತನೆಯಾಗುತ್ತದೆ. ಅದು ಹಿಂಸಾಮಾರ್ಗ ತ್ಯಜಿಸಿ ದೇವರ ಧ್ಯಾನ ಮಾಡಲಣಿ-ಯಾಗುತ್ತದೆ.

ಇದೇ ಕಥಾನಕದ ಇನ್ನೊಂದು ಆಕರವೂ ನನಗೆ ದೊರೆತಿದೆ. ಸರಳ ಓಟದ ಈ ಮಾಟದ ಕಥಾನಕ ಕೌಟುಂಬಿಕ ಪ್ರೇಮ-ತ್ಯಾಗಗಳಿಗೆ ಕನ್ನಡಿಯಾಗಿದೆ.

ಬೇಟೆಗಾರನೊಬ್ಬ ಬಲೆಹಾಕಿ ಚಿಗರಿಯೊಂದನ್ನು ಸೆರೆಹಿಡಿಯುತ್ತಾನೆ. ಚೂರಿ ಎತ್ತಿ, ಕುತ್ತಿಗಿ ಕೊಯ್ಯಬೇಕು–ಎಂದಿದ್ದಾಗ, ಚಿಗರಿ ಆತನಲ್ಲಿ ಮೊರೆಯಿ-ಡುತ್ತದೆ.

“ಬ್ಯಾಟಗಾರ ಈದು ನಾನು ಮೂರು ದಿನಾ|
ಸಣ್ಣ ಎರಡು ಮರಿ ಅದಾವೊ ತೆರೆದಿಲ್ಲಾ ಕಣ್ಣಾ ||ಪ||
ಮೊಲೆ ತೊರೆದು ಹಾಲ ಹರಿದು ಹೋಗತಾವಿನ್ನಾ||”

ಆದರೆ ಆ ತಾಯಿಯ ಮೊರೆ ಬೇಟೆಗಾರನ ಕಲ್ಲೆದೆಯನ್ನೇನೂ ಕರಗಿಸುವದಿಲ್ಲ. ಯಾರಾದರನ್ನು ಜಾಮೀನು ಕೊಟ್ಟು ಹೋಗು ಎಂದು ಆತ ಹೇಳುವ. ಅಷ್ಟರಲ್ಲಿ ಪೈಗಂಬರರು ಅಲ್ಲಿಗೆ ಆಗಮಿಸಿ, ತಾವು ಜಾಮೀನಾಗಿ ಆ ಚಿಗರಿಯನ್ನು ಬಿಡಿಸುವರು.

"ಬಿಟ್ಟ ಆಕ್ಷಣ ಭರ್‍ರಂತ ಓಡಿಹೋತು ಮರಿ ಇರೂ *ಠಾನ|
ಎರಡು ಕರ ಓಡಿ ಬಂದಾವು ನೋಡಿ ತಾಯಿಯನಾ|
ಬಾಯಿ ಹಾಕತಾವು ಮಳಿಗೆ, ಬಂತು ಅನುಮಾನ||"

(*ಸ್ಥಾನ)

"ಕೇಳತಾವ ಇನ್ನ ಯಾಕವ್ವ ನಿನ್ನ ಹಾಲು ಇಂದಿನ ದಿನ|
ವಿಷ ಹತ್ತತಾವ ನಮಗ ಏನ ಕಾರಣ|
ಹೇಳಬೇಕ ತಾಯವ್ವ ಆದ ಕಥನ||"

ಆಗ ತಾಯಿ ವಸ್ತುಸ್ಥಿತಿಯನ್ನು ತನ್ನ ಮರಿಗಳಿಗೆ ತಿಳಿಸುತ್ತದೆ. ತಾಯಿಯೊಡನೆ ಮಕ್ಕಳೂ ಆತ್ಮ ಬಲಿದಾನಕ್ಕೆ ಮುಂದಾಗುತ್ತವೆ. ಅದನ್ನು ಕಂಡು;

"ಗಂಡೆರಳಿ ಓಡಿ ಬಂತೊ ನೋಡಿ ಅವರನ್ನ|
ನಿಮಕಿಂತ ನನ್ನ ಜನ್ಮ ಹೆಚ್ಚಿಂದೇನಾ||"

ಹಾಗೆ ಗಂಡು, ಹೆಣ್ಣು, ಮರಿ ಚಿಗರೆಗಳೆಲ್ಲ ಸೇರಿ ಬೇಟೆಗಾರನಿದ್ದಲ್ಲಿಗೆ ಬರುತ್ತವೆ. ಜಾಮೀನಾಗಿ ಅಲ್ಲಿದ್ದ ಪೈಗಂಬರರು ಅವುಗಳನ್ನು ಬೇಟೆಗಾರನಿಗೆ ಒಪ್ಪಿಸುತ್ತಾರೆ.

ಈ ಸಂದರ್ಭದಲ್ಲಿ ನಾನು–ತಾನು ಎಂದು ಪ್ರತಿಯೊಂದು ಚಿಗರಿಯೂ ಆತ್ಮ ಬಲಿದಾನಕ್ಕೆ ಮುಂದಾಗುತ್ತದೆ!

" 'ಕೊಟ್ಟೇನಿ ವಚನ' ಹೆಣ್ಣು ಚಿಗರಿ ಅಂತೈತೊ 'ಕೊಯ್ಯೊ ನನ್ನ'|
ಗಂಡೆರಳಿ ಅಡ್ಡ ಬಿತ್ತೊ; 'ಬ್ಯಾಡಾ ಆಕಿನ್ನಾ|
ನನ್ನ ಕೊಯ್ಯುವದು; ಬಿಡು ಮಕ್ಕಳ ಸಲುವಾಕಿನ್ನ||' "

ಆದರೆ ಅದನ್ನೊಪ್ಪದೆ, ಹೆಣ್ಣುಚಿಗರಿ ಮೊರೆಯಿಡುತ್ತ,

"ಅಂತೈತಿ, ಇನ್ನ 'ಮುತ್ತೈದಿ ಸಾವು ಮುಂಚೆ ಕೊಯ್ಯೊ ನನ್ನ||
ಗಂಡ ಸತ್ತ ಮೇಲೆ ಬರುವದು ರಂಡಿತನ|
ನನ್ನ ಕೊಯ್ದು, ಬಿಡೂ ನನ್ನ ಪತಿ–ಪುರುಷರನ್ನ'||"

ಆಗ,

"ಮರಿ ಸಣ್ಣ-ಸಣ್ಣ ಬಿದ್ದ ಹೊರಳಾಡತಾವ ಕಾಲಮೇಲಿನ್ನ|
'ನಮ್ಮನ್ನ ಕೊಯ್ದು, ಬಿಡೂ ತಾಯಿ-ತಂದೀನ|
ಪರದೇಶಿ ಮಾಡಬೇಡ ನೀ ನಮ್ಮನ್ನ'||"

ಆ ಹೆಣ್ಣು, ಗಂಡು, ಮರಿ ಚಿಗರಿಗಳ ಪರಸ್ಪರ ಪ್ರೇಮ-ತ್ಯಾಗ ಮನೋಭಾವಗಳನ್ನು ಕಂಡು,

"ಬ್ಯಾಟಗಾರನಾ ಮನಾ ಕರಗಿ ಆದೀತೊ *ಮ್ಯಾನವಿನ|
ಬಕ್ಷಿಸ ಮಾಡಿ ಬಿಟ್ಟಾನೊ ನಾಲ್ಕು ಪ್ರಾಣೀನಾ|
ಹೋಗಿ ಸೇರಿಕೊಂಡಾವ ತಮ್ಮ ಅರ್‍ಯಾಣಾ||"

(*ಮ್ಯಾನ-ಮೇಣ)

ಒಟ್ಟಿನಲ್ಲಿ ಈ ಮಾಲಿಕೆಗೆ ಸೇರಿದ ಕಥಾನಕಗಳು ಕರ್ನಾಟಕದ ಜನ-ಜೀವನದಲ್ಲಿ ಪ್ರಚಲಿತವಿರುವ 'ಪವಾಡ'ಗಳಿಂದ ಪ್ರೇರಿತವಾಗಿ ಇಸ್ಲಾಂ ಮತದ ಪರಿವೇಷ ತೊಟ್ಟು ನಿಂತಿವೆ. ಇಸ್ಲಾಂ ಮತವು ಎತ್ತಿ ಹಿಡಿಯುವ ವಿಶ್ವಮಾನ್ಯ ಜೀವನ ಮೌಲ್ಯಗಳಾದ ದೈವಭಕ್ತಿ, ದಾನಶೂರತನ, ನಿರಹಂಕಾರ, ಶರಣರಕ್ಷೆ, ವಚನ ಪರಿಪಾಲನೆ, ಕೌಟುಂಬಿಕ ಪ್ರೇಮ ಇವನ್ನು ಈ ಪವಾಡಗಳು ಹೊಳೆಯಿಸಿವೆ.

೭

ಕರ್ಬಲ ಪದಗಳಲ್ಲಿ ಮೂರನೆಯ ಗುಂಪೆನಿಸಿದ 'ಇತರ ಕಥಾನಕಗಳು' ಮೊದಲಿನ ಎರಡು ಗುಂಪುಗಳಿಂದ ವಿಭಿನ್ನವಾಗಿವೆ, ವಿಶಿಷ್ಟವಾಗಿವೆ. ಮೊದಲನೆಯ ಪ್ರಕಾರದ 'ಕರ್ಬಲ ಕಥಾನಕ'ಗಳು ಸಂಪೂರ್ಣವಾಗಿ ಇಸ್ಲಾಮೀ ಕಥಾನಕ-ಗಳಾದರೆ, ಎರಡನೆಯ ವಿಧದ 'ಪವಾಡ ಕಥಾನಕ'ಗಳು ಇಸ್ಲಾಮದ ಪರಿವೇಷ ತೊಟ್ಟ ಹಿಂದೂ ಕಥಾನಕಗಳಾಗಿವೆ. ಆದರೆ ಈ ಮೂರನೆಯ ಗುಂಪಿನವು ಇಸ್ಲಾಂ ಮತ, ಸಂಸ್ಕೃತಿಯ ಅತ್ಯಲ್ಪವಾದ ಅ-ಮಹತ್ವದ ಸ್ಪರ್ಶಮಾತ್ರ ಇರುವ ಕಥಾನಕಗಳಾಗಿವೆ. ಮಾನವ ಪ್ರಪಂಚಕ್ಕೆ ಸಾಮಾನ್ಯವಾದ ದೈವಭಕ್ತಿ, ಲೋಕ ನೀತಿ, ಮೊದಲಾದವುಗಳನ್ನೂ ಮುಸ್ಲಿಮೇತರ ಸಂಸ್ಕೃತಿಯನ್ನೂ ಪ್ರತಿಬಿಂಬಿಸು-ವಂಥ ಪದಗಳಾಗಿವೆ. 'ಪತಿವ್ರತೆ ಪಡೆದಫಲ' ಎಂಬ ಪದ|,

"ಬಂಜಿದು ಕತಿ ಹೇಳುವೆನಸಲಾ
ಬ್ರಹ್ಮನ ಬರಹ ತಪ್ಪಲಿಲ್ಲಾ
ಪತಿವ್ರತೆ ಫಲ ಪಡಿದಳಲ್ಲಾ"

ಎಂದು ಪ್ರಾರಂಭವಾಗುತ್ತದೆ. ಈ ಕಥಾನಕದ ಕೇಂದ್ರ ವ್ಯಕ್ತಿಯಾದ ಪತಿವ್ರತೆ,

"ದೇವರಿಗೆ ಬೇಡಿಕೊಂತಾಳಲ್ಲಾ
ಕಣ್ಣ ತೆಗೆದು ನೋಡ್ರಿ ನನ್ನ ಮೇಲಾ
ನನ್ನ ಹೊಟ್ಟೇಲಿ ಶಿಶುವು ಹುಟ್ಟಿದರೆ ಬಸವನ ಮೈಮೇಲಾ|
ಬಂಗಾರ ಮುಚ್ಚಿ ಬಿಡುನೆ ಮದಲಾ........
ಹೀಗೆಂದು ಹರಕೆ ಹೊತ್ತಾಳಲ್ಲಾ"

ಮಕ್ಕಳಿಲ್ಲದ ಆಕೆಯಲ್ಲಿ ತಾಯ್ತನದ ಹಂಬಲ ಹತ್ತಿ ಉರಿಯುತ್ತದೆ. ಮಂದೀ ಮಕ್ಕಳನ್ನು ಕಂಡು ಮನಸ್ಸು ಮರ ಮರ ಮರಗುತ್ತದೆ. ಬದುಕೇ ಬೇಡವೆನಿಸುತ್ತದೆ. ಆಕೆ ಹೊಳೀ ಬಾವೀ ಪಾಲಾಗಲು ಸಿದ್ಧಳಾಗುತ್ತಾಳೆ. ಅದನ್ನು ಕಂಡು ಆಕೆಯ ಪ್ರಿಯ ಪತಿಯೂ ಅವಳೊಡನೆ ಹೊರಡುತ್ತಾನೆ. ಇಬ್ಬರೂ ಅಡವಿಗೆ ಹೋಗಿ, ಅಲ್ಲೊಂದು ಹೊಳೆ ಕಂಡು ಜತೆಯಾಗಿಯೇ ಪ್ರಾಣನೀಗಲೆಂದು ಕಣ್ಣು ಕಟ್ಟಿಕೊಂಡು ಸಿದ್ಧರಾಗುತ್ತಾರೆ.

ಆಗ,

"ಶಿವಗ ಅರಿವು ಹುಟ್ಟಿತಲ್ಲಾ
ಕೈಲಾಸದಿಂದಿಳಿದು ಬಂದನಲ್ಲಾ
ಬಾವಾನ ವೇಷತಾಳಿ ಇದರಿಗೆ ಬಂದು ನಿಂತನಲ್ಲಾ"

ಆ ದಂಪತಿಗಳಿಗೆ ಮಕ್ಕಳ ಫಲದ ವರದಾನ ಮಾಡಿ ಆತ ಮಾಯವಾಗುವನು. ಅವರು ಸಂತೋಷಗೊಂಡು ಮನೆಗೆ ಮರಳುವರು. ಆಕೆ ಮುಂದೆ ದಿನ ತುಂಬಿ ಮಗನನ್ನು ಹಡೆಯುವಳು.

ಈ ಸರಳ ಕಥಾನಕದಲ್ಲಿ ಬರುವ 'ಬ್ರಹ್ಮನ ಬರಹ' 'ಬಸವನಿಗೆ ಬಂಗಾರ ಹರಕೆ ಹೊರುವದು' 'ಶಿವ ಕೈಲಾಸದಿಂದಿಳಿದು ಬರುವದು'—ಇವೆಲ್ಲ ಅಂಶಗಳು ಈ ಕಥಾನಕದಲ್ಲಿ ಹಿಂದೂ ಸಂಸ್ಕೃತಿಯು ಹಾಸುಹೊಕ್ಕಾಗಿರುವದನ್ನೇ ಸ್ಪಷ್ಟಪಡಿಸುತ್ತದೆ. ಇಲ್ಲಿ ಬಂದಿರುವ ಏಕಮಾತ್ರ ಪದ 'ಬಾವಾ' ಎನ್ನುವದು ಮುಸ್ಲಿಂ ಸಾಧುವನ್ನು ಸೂಚಿಸುತ್ತದೆ.

ಇದೇ ಗುಂಪಿಗೆ ಸೇರುವ ಎರಡನೆಯ ಪದ 'ಜಾಣ ಅತ್ತಿ ಕ್ವಾಣ ಸೊಸಿ' ಎಂಬುದು. ಕನ್ನಡ ನಾಡಿನ ಜಾನಪದ ಕತೆಯೊಂದು 'ಕರ್ಬಲಾ' ಪದದ ರೂಪದಲ್ಲಿ ಕಾಣಿಸಿಕೊಂಡಿದೆ. ತಾಯಿ-ಮಗ ಇಬ್ಬರೂ ಅನ್ಯೋನ್ಯರಾಗಿದ್ದರು. ಸಿರಿ, ಸಂಪತ್ತು ಸಾಕಷ್ಟಿದ್ದಿತು. ಆ ತಾಯಿ,

"ನೆನಸಿ ಅಲ್ಲಾನಾ
ಮಾಡ್ಯಾಳವಳ ಲಗ್ನೆನಾ"

ಮನೆಗೆ ಬಂದ ಸೊಸೆ, ಗಂಡನನ್ನು ಮರುಳು ಮಾಡುತ್ತಾಳೆ. ಮುದಿಕಿಯಾದ ಅತ್ತೆ ಮನೆಗೆ ಮೂಳಳಾಗಿದ್ದಾಳೆಂದು ದುರ್ಬೋಧನೆ ಮಾಡಿ ಗಂಡನ ತಲೆ ಕೆಡಿಸುತ್ತಾಳೆ. ಆಕೆಯ ಮಾತಿಗೆ ಆತ ಕಿವಿ ಸೋಲುತ್ತಾನೆ. ನಡುರಾತ್ರಿ ಎದ್ದು ತನ್ನ ತಾಯಿಯನ್ನು ಕಂಬಳಿಯ ಮಟ್ಟೆಯಲ್ಲಿ ಕಟ್ಟಿಕೊಂಡೊಯ್ದು ಹೊಳೆಯೊಳಗೆ ಒಗೆಯುತ್ತಾನೆ. ಆದರೆ 'ಅಲ್ಲಾನ ಕರುಣಾ ಆಕಿ ಮ್ಯಾಲೆ ಪೂರ್ಣಾ' ಇದ್ದುದ-ರಿಂದಾಗಿ, ಆ 'ಮಟ್ಟೆ' ಬಿಚ್ಚಿ ಆ ಮುದುಕಿ ಬದುಕುಳಿಯುತ್ತಾಳೆ. ದೇವರ ಕೃಪೆ-ಯನ್ನು ನೆನೆಯುತ್ತಾ ಊರದಾರೀ ಹಿಡಿಯುತ್ತಾಳೆ. ಊರ ಹೊರಗಿನ 'ಮಾರುತಿ ಗುಡಿ'ಗೆ ಬಂದು, ದೇವರ ಹಿಂದೆ ಅಡಗಿಕೊಂಡಿರುತ್ತಾಳೆ. ಅಷ್ಟರಲ್ಲಿ ಅಲ್ಲಿಗೆ ಬಂದ ಮೂವರು ಕಳ್ಳರು ತಮ್ಮ ಅಂದಿನ ಕಳವು ಯಶಸ್ವಿಯಾಗುವಂತೆ ಮಾರುತಿ ದೇವರನ್ನು ಬೇಡಿಕೊಳ್ಳುತ್ತಾರೆ. ತಾವು ತಂದ ಸಂಪತ್ತಿನಲ್ಲಿಯ ಮೂರರಲ್ಲೊಂದು ಪಾಲನ್ನು ದೇವರಿಗೆ ಕೊಡುವದಾಗಿ ನಿವೇದಿಸಿಕೊಳ್ಳುತ್ತಾರೆ. ಜಾಣೆಯಾದ ಮುದುಕಿ ಮಾರುತಿಯೇ ತಾನೆಂಬಂತೆ ವರ ಕೊಡುತ್ತಾಳೆ. ಉತ್ಸಾಹಗೊಂಡ ಕಳ್ಳರು ಊರ ಶ್ರೀಮಂತನ ಮನೆಯನ್ನು 'ದರೂಡಿ ಮಾಡಿ' ಹರಕೆ ಹೊತ್ತಂತೆ ಒಂದು ಕೊಡ ಸಂಪತ್ತನ್ನು ಮಾರುತಿ ದೇವರೆದುರಿಟ್ಟು ಹೊರಟು ಹೋಗುತ್ತಾರೆ.

ಆಮೇಲೆ ಮುದುಕಿ ಅವಿತ ಸ್ಥಳದಿಂದ ಎದ್ದು ಸಾಗರ ಬಿದ್ದು ಬಂದು, ಆ ಕೊಡವನ್ನೆತ್ತಿಕೊಂಡು ಮನೆಗೆ ಬರುತ್ತಾಳೆ. ಸಂಪತ್ತು ತಂದ ಅತ್ತೆಯನ್ನು ಕಂಡು ಸೊಸೆಗೆ ಅಪಾರ ಸಂತೋಷವಾಗುತ್ತದೆ:

ಜಾಣೆಯಾದ ಮುದುಕಿ, ಸೊಸೆಗೆ ತಕ್ಕ ಶಾಸ್ತಿ ಮಾಡಲು ಒಂದು ಹಂಚಿಕೆ ಹಾಕುತ್ತಾಳೆ.

"ಏನು ಹೇಳ್ಲಿ ನನ್ನ ಸೊಸಿನಾ
ಅಲ್ಲೆ ದಂಡೇಲಿ ಹಾಕಿ ಬಂದನಾ
ಒಳಾಕ್ಕತ ಒಗಿಲಿಲ್ಲ ಪೂರ್ಣಾ
ತಳತಳನಾ ತಪೇಲಿನಾ ಮುಂದು ಏನೇನ ಸ್ವಾಮಾನಾ
ಕಣ್ಣಿಗೆ ಕಾಣತಿದ್ವು ಬಲು ಹಸನಾ
ಆಗಲಿಲ್ಲ ಎತ್ತಿಕೊಳ್ಳೊ ತ್ರಾಣಾ||"

ಎಂದು ನುಡಿಯುತ್ತಾಳೆ. ಅದನ್ನು ಕೇಳಿ ಆಸೆಬುರುಕ ಸೊಸೆಯು ನಾಲಿಗೆಗೆ ನೀರೂರುತ್ತದೆ. ತನ್ನನ್ನೂ ಒಯ್ದು ಆಳವಾದಲ್ಲಿ ಹೊಳೆಗೆ ಹಾಕಿ ಬಂದರೆ,

ತಾನು ಅತ್ತೆಗಿಂತ ಹೆಚ್ಚು ಸಂಪತ್ತನ್ನು ತರಬಲ್ಲೆನೆಂದು ಗಂಡನಿಗೆ ಹೇಳಿ, ಆತನ ಮನವೊಲಿಸುತ್ತಾಳೆ. ಮೂರ್ಖ ಗಂಡ ಹಾಗೇ ಮಾಡುತ್ತಾನೆ. ಹೀಗೆ ಸೊಸೆ ಹೊಳೆಯ ಪಾಲಾಗುತ್ತಾಳೆ. ಆಗ ಜಾಣ ಮುದುಕಿ ತಾನು ಮಾಡಿದ ಹಂಚಿಕೆ-ಯನ್ನು ಮಗನಿಗೆ ತಿಳಿಸಿ, ಅವಳನ್ನು ಮರೆಯಲು ಹೇಳುತ್ತಾಳೆ.

ಈ ಕತೆಯಲ್ಲಿ 'ಅಲ್ಲಾ' ಎಂಬ ಪದದ ಬಳಕೆ ಎರಡು ಬಾರಿಯಾಗಿದೆ. ಇದು ಇಸ್ಲಾಂ ಸಂಸ್ಕೃತಿಯ ಸಂಸ್ಪರ್ಶ ಮಾತ್ರವಾಗಿದೆ. ಇಡೀ ಕಥೆ ಮಾನವ-ಸಾಮಾನ್ಯವಾದ ಅತ್ತೆ-ಸೊಸೆಯರ ಸೆಣಸಾಟದ ಸುತ್ತು ಹಬ್ಬಿದೆ. ಮಾರುತಿ ದೇವರ ಪ್ರಸ್ತಾಪ ಹಿಂದೂ ಸಂಸ್ಕೃತಿಯ ಪ್ರಭಾವದ ಸ್ಪಷ್ಟ ಗುರುತಾಗಿದೆ.

ಇದೇ ಗುಂಪಿನ ಇನ್ನೊಂದು ಪದ 'ಹರನಾಮ ಸ್ಮರಣೆಯ ಮಹತ್ವ' ಎಂಬುದು ಹೆಸರೇ ಸೂಚಿಸುವಂತೆ ಹಿಂದೂ ಸಂಸ್ಕೃತಿಯಲ್ಲಿ ಮಿಂದೆದ್ದುದಾಗಿದೆ.

ಪ್ರೇಮದಿಂದ ಸಂಸಾರ ಮಾಡಿಕೊಂಡಿದ್ದ ಮೀನುಗಳೆರಡು ದೇವರ ನಾಮಸ್ಮರಣೆ ಮಾಡದೆಯೇ ಊಟ ಮಾಡುತ್ತಿರಲಿಲ್ಲ. ಅಂಥ ಅವು ಒಮ್ಮೆ ಜಾಲಗಾರನೊಬ್ಬನ ಬಲೆಗೆ ಸಿಕ್ಕು ಬೀಳುತ್ತವೆ. ಆತ ಅವನ್ನು ತಂದು ಅಡಿಗೆ ಮಾಡಲು ತನ್ನ ಹೆಂಡತಿಗೆ ಹೇಳುತ್ತಾನೆ. ಬದುಕಿನ ಆಸೆ ಬಿಟ್ಟ ಹೆಣ್ಣು ಮೀನು,

"....ಸುಂದರಾ| ಮನೋಹರಾ|
ನಿನ್ನ ದೇವರಾ|
ಎಲ್ಲಿ ಇರುವನು ಬಂತೊ ಘೋರಾ|
ಸಾಯೊ ಕಾಲಕ್ಕೆ ಇಲ್ಲೊ ಯಾರ್ಯಾರಾ||"

ಎಂದು ಗೋಳಿಡುತ್ತಾಳೆ. ಆದರೆ ಎದೆಗೆಡದ ಗಂಡು ಮೀನಿಗೆ ದೈವ ಕೃಪೆಯಲ್ಲಿ ಅಚಲ ನಂಬಿಗೆ. ಅಂತೆಯೇ ಅದು ಹೇಳುತ್ತದೆ:

"ಸೃಷ್ಟಿಕರ್ತ ಶಂಕರಾ
ಆತ ಇಲ್ಲದಿದ್ದರಾ
ಲೋಕ ಬದುಕುವದು ಯಾವ ತರಾ
ಅನ್ನSS ಮೊದಲ ಹರಹರಾ||"

ಮುಂದೆ ಮೀನುಗಳ 'ನಾಮಸ್ಮರಣೆ'ಯ ಫಲವಾಗಿ, 'ಶ್ರೀಹರ'ನ ಕೃಪೆ-ಯಿಂದ ಮಳೆ ಸುರಿಯುತ್ತದೆ. (ಇಲ್ಲಿಯ ಶ್ರೀಹರ ಎಂಬ ಪದ ಪ್ರಯೋಗವು ಧರ್ಮ ಸಮನ್ವಯದ ದೃಷ್ಟಿಯಿಂದ ಗಮನಾರ್ಹವಾಗಿದೆ.) ಅವರದು ಮಾಳಿಗೆಯ

(ಅಂದರೆ ಮಣ್ಣಿನ ಚಪ್ಪರದ) ಮನೆಯಾಗಿದ್ದಿತಾದ್ದರಿಂದ, ಬೆಳಕಂಡಿ ಮುಚ್ಚಲೆಂದು ಆ ಜಾಲಗಾರತಿ ಮಾಳಿಗೆ ಏರುತ್ತಾಳೆ. ಆಕೆ ಇಳಿದು ಬರುವಷ್ಟರಲ್ಲಿ ಧಾರಾಕಾರ-ವಾಗಿ ಮಳೆ ಸುರಿದು, ಊರಲ್ಲೆಲ್ಲ ನೀರು ತುಂಬಿ ಹರಿಯುತ್ತದೆ. ಆ ಮೀನು-ಗಳು ಆ ಪ್ರವಾಹದಲ್ಲಿ ಸೇರಿಕೊಂಡು, ಪ್ರಾಣ ಉಳಿಸಿಕೊಳ್ಳುತ್ತವೆ.

ಹೀಗೆ 'ಹರನಾಮ ಸ್ಮರಣೆಯ ಮಹತ್ವ'ವನ್ನು ಬಿಂಬಿಸುವ ಈ ಪದದಲ್ಲಿ ಉದ್ದಕ್ಕೂ ಹಿಂದೂ ಸಂಸ್ಕೃತಿಯು ಒಡಮೂಡಿದೆ. ಆದರೆ ಪದದ ಮುಗಿತಾಯ-ದಲ್ಲಿ, ಜಾನಪದ ಕವಿ,

"ಚಿಕ್ಕ ಮಸೂತಿಯಲ್ಲಿ ಶರಣರಾ
ಓಡಿ ಹೋಗಿ ಮಾಡು ನಮಸ್ಕಾರಾ"

ಎಂದು ನುಡಿದದ್ದು, 'ಮೊಹರಂ ಹಬ್ಬ'ದಲ್ಲಿ 'ಮಸೀದೆ'ಯಲ್ಲಿ ಕೂಡ್ರಿಸುವ ವೀರರ ಸ್ಮಾರಕಗಳಾದ ತಾಬೂತ ಅಥವಾ ಡೋಲಿಗಳನ್ನು ನಿರ್ದೇಶಿಸುತ್ತವೆ. ಇದು ಇಸ್ಲಾಂ ಸಂಸ್ಕೃತಿಯ ಸಂಸ್ಪರ್ಶ ಮಾತ್ರವಾಗಿದೆ.

೮

ಈ 'ಕರ್ಬಲ ಪದ'ಗಳು ಮೂಲತಃ ಇಸ್ಲಾಂ ಸಂಸ್ಕೃತಿಯಿಂದ ಸ್ಫುರಿ-ಸಿದವುಗಳಾದರೂ, ಅವುಗಳ ಮೇಲೆ ಹಿಂದೂ ಸಂಸ್ಕೃತಿಯ ಪ್ರಭಾವ ಮುದ್ರೆ ಸರ್ವಸಾಮಾನ್ಯವಾಗಿದೆ. ಅದರಲ್ಲಿಯೆ ವೀರಶೈವಮತದ ಪ್ರಭಾವ ವಿಶೇಷವಾ-ಗಿದೆ. ವೀರಶೈವ ಪರಿಭಾಷೆಯ ಪದಗಳು ಸಾರ್ವತ್ರಿಕವಾಗಿವೆ. ಶಿವ, ಮಾದೇವ, ಹರ, ಶರಣ ಎಂಬ ಪದಗಳು ಎಲ್ಲೆಲ್ಲೂ ಕಂಡು ಬರುತ್ತವೆ. ಒಂದೆಡೆಗೆ 'ಶ್ರೀಕಲ್ಮಾ' ಎಂಬ ಪದ ಪ್ರಯೋಗವೂ ಇದೆ. ಇವೆಲ್ಲ ಮತೀಯ ಸಾಮರಸ್ಯಕ್ಕೆ ಕೈದೀವಿಗೆ-ಯಾಗಿವೆ. ಕರ್ನಾಟಕ ಸಂಸ್ಕೃತಿಯ ಪರಮತಸಹಿಷ್ಣುತೆಗೆ ಸಾಕ್ಷಿಯಾಗಿವೆ.

ಈ ಪದಗಳಲ್ಲಿ ಭಾವ-ಭಾಷೆಗಳ ಸರಳತೆ-ಸಹಜತೆಗಳಿಗೇ ಪ್ರಾಶಸ್ತ್ಯ-ವಿದೆ. ಅನೇಕ ಸಲ ಗದ್ಯತನವೇ ಎದ್ದು ಕಾಣುತ್ತದೆ. ಹುಡಿಯಲ್ಲಿ ಬೆರೆತು ಹೋದ ಹೊನ್ನಿನ ಕಣಗಳಂಥ ಕಾವ್ಯಾಂಶಗಳೂ ಇವೆ. ಅಲ್ಲೆಲ್ಲ ನಮ್ಮ ಜಾನಪದ ಕಾವ್ಯದ ಸತ್ವ ಉಜ್ವಲವಾಗಿ ಬೆಳಗಿದೆ.

ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ ಬೆಲೆಬಾಳುವಂಥ ಅಂಶಗಳನ್ನೊಳ-
ಗೊಂಡ ಈ ಕರ್ಬಲ ಪದಗಳ ಸಂಕಲನ, ಸಮಾಲೋಚನೆ ಆಗಬೇಕಿದೆ. ಹಾಗಾ-
ದಲ್ಲಿ ಅದು ಕನ್ನಡ ಸಂಸ್ಕೃತಿಯ ಮೇಲೆ, ಹಿಂದೂ-ಮುಸ್ಲಿಂ ಬಾಂಧವ್ಯದ ಮೇಲೆ
ಹೊಸ ಬೆಳಕನ್ನು ಚೆಲ್ಲ ಬಹುದಾಗಿದೆ.

1973



